

ತಿರುಪತಿ ವೆಂಕಟರಮಣ ನಿನಗೇತಕೆ ಬಾರದೊ ಕರುಣ
ನಂಬಿದೆ ನಿನ್ನಯ ಚರಣ ಪರಿಪಾಲಿಸಬೇಕೋ ಕರುಣ ॥ ಪ ॥

ಆಳಗಿರಿಯಿಂದಲಿ ಬಂದ ಸ್ವಾಮಿ ಅಂಜನಗಿರಿಯಲಿ ನಿಂದ
ಕೊಳಲನೂದುವಾ ಚಂದ ನಮ್ಮ ಕುಂಡಲರಾಯ ಮುಕುಂದ ॥ ೧ ॥

ಮೂಡಲಗಿರಿಯಲಿ ನಿಂತ ಮುದ್ದು ವೆಂಕಟಪತಿ ಬಲವಂತ
ಈಡಿಲ್ಲ ನಿನಗೆ ಶ್ರೀಕಾಂತ ಈರೇಳು ಲೋಕಕನಂತ ॥ ೨ ॥

ಅಪ್ಪವು ಅತಿರಾಸ ಮೆದ್ದ ಸ್ವಾಮಿ ಅಸುರರ ಕಾಲಲಿ ಒದ್ದ
ಸತಿಯ ಕೂಡಾಡುತಲಿದ್ದ ಸ್ವಾಮಿ ಸಕಲದುರ್ಜನರನು ಗೆದ್ದ ॥ ೩ ॥

ಎಲ್ಲದೇವರ ಗಂಡ ಅವ ಚಿಲ್ಲರೆದೈವದ ಮಿಂಡ
ಬಲ್ಲಿದವರಿಗೆ ಉದ್ದಂಡ ಶಿವಬಿಲ್ಲಮುರಿದ ಪ್ರಚಂಡ ॥ ೪ ॥

ದಾಸರ ಕಂಡರೆ ಪ್ರಾಣ ತಾ ಧರೆಯೊಳಗಧಿಕ ಪ್ರವೀಣ
ದ್ವೇಷಿಯ ಗಂಟಲ ಗಾಣ ನಮ್ಮ ದೇವಗೆ ನಿತ್ಯಕಲ್ಯಾಣ ॥ ೫ ॥

ಪಾಪವಿನಾಶಿನಿ ಸ್ನಾನ ಹರಿಪಾದೋದಕವೇ ಪಾನ
ಕೋಪತಾಪಗಳ ನಿಧಾನ ಪುರಂದರವಿಠಲನ ಧ್ಯಾನ ॥ ೬ ॥

—ಪುರಂದರದಾಸರು

# ತಿರುಮಲೆ ತಿರುಪತಿ ದೇವಸ್ಥಾನಗಳು.

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 10 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ. ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಿನ ವಾರ್ಷಿಕ ಬಡ್ಡಿಯಿಂದ ದಿನವೊಂದಕ್ಕೆ 500 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ.
* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.
* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆಯಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು
* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.
* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.
* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಕಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್. ಬೊಂಬಾಯಿ) | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ.

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂ.ಪ್ರ.**

**ಕಾರ್ಯನಿರ್ವಹಣಾಧಿಕಾರಿ**



ಗೌರವ ಸಂಪಾದಕರು :
ಎಸ್. ಲಕ್ಷ್ಮಿನಾರಾಯಣ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಪಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



ಸಂಪುಟ ೧೬] ಮೇ ೧೯೮೬ [ಸಂಚಿಕೆ ೧೨

# ವಿಷಯಸೂಚಿ



ರಕ್ಷಾಪತ್ರದಲ್ಲಿ : ತಿರುಮಲೆ ಬೆಟ್ಟಗಳ ವನಸಿರಿ.

ಒಳಗಡೆ : 1. ದಿವ್ಯಾರಾಮ ಯೋಜನೆ ಹಾಗೂ ವಿಶಿಷ್ಟ ಚಿಕಿತ್ಸಾಲಯ ಭವನಗಳಿಗೆ ಶಂಕುಸ್ಥಾಪನೆ ಮಾಡುತ್ತ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್.ಟಿ. ರಾಮರಾವ್.

2. ಚಿಪ್ಕೋ ಚಳುವಳಿಯ ನೇತಾರ ಶ್ರೀ ಸುಂದರಲಾಲ್ ಬಹುಗುಣ.

# ಸಂಪಾದಕೀಯ

ಸನಾತನಧರ್ಮದಲ್ಲಿ ವೃಕ್ಷಪೂಜೆಗೆ ಪ್ರಮುಖಸ್ಥಾನವಿದೆ. ಕಾರಣವಿಲ್ಲದಿಲ್ಲ. ಪ್ರಕೃತಿಯ ಅವಿಭಾಜ್ಯ ಅಂಗವಾಗಿ ತನ್ನ ಎಲ್ಲ ರೂಪಗಳಲ್ಲೂ ಮಾನವನ ಅಭಿವೃದ್ಧಿಗೆ-ಮೂಲಭೂತವಾಗಿ ಇರುವಿಕೆಗೆ ಸಹಕಾರಿ ಯಾದದ್ದು ಸಸ್ಯಸಂಪತ್ತು. (ಎಂತಲೇ ಒಂದು ಗಿಡಕ್ಕೆ ಸಹಕಾರಿ ಎಂದೇ ಹೆಸರಿಟ್ಟರು) ನೆರಳಾಗಿ, ನೆಲೆಯಾಗಿ ಹೂವಾಗಿ, ಕಾಯಾಗಿ, ಎಲೆಯಾಗಿ, ತೊಲೆಯಾಗಿ ಕಡೆಗೆ ಕಟ್ಟಿಗೆಯಾಗಿ ಮಾನವನ ದೈನಂದಿನ ಬಾಳಿನಲ್ಲಿ -ಸುಖದುಃಖಗಳೆಲ್ಲದರಲ್ಲೂ-ಪಾಲುಗೊಳ್ಳುವುದಷ್ಟೇ ಅಲ್ಲ, ಸೂರ್ಯ ಕಿರಣಗಳಲ್ಲಿ ಮಿಂದು ವಾತಾವರಣದ ಇಂಗಾಲಾಮ್ಲವನ್ನು ವಿಭಜಿಸಿ, ಪ್ರಾಣಿಕೋಟಿಗೆ ಅನುಕ್ಷಣವೂ ಅಗತ್ಯವಾದ ಆಮ್ಲಜನಕವನ್ನು ನೀಡುವುದೂ ಸಸ್ಯಸಂಪದವೇ.

ವೃಕ್ಷ ಸಂಪತ್ತು ಹೆಚ್ಚಿದ ಕಡೆ ಮಳೆ ಸಮೃದ್ಧವೆನ್ನುತ್ತಾರೆ ಪರಿಸರ ವಿಜ್ಞಾನಿಗಳು. ಎಂತಲೇ ಪ್ರಾಚೀನ ಕಾಲದಿಂದಲೂ ಮರಗಳನ್ನು ಬೆಳೆಸುವುದರಲ್ಲಿ ಆಸಕ್ತಿಯನ್ನು ಹರಡುತ್ತಿದ್ದರು, ಅಶೋಕನಿಂದ ಹಿಡಿದು ಶ್ರೀಕೃಷ್ಣದೇವರಾಯನವರೆಗೆ. ಆಂಗ್ಲರ ಕಾಲದಲ್ಲೂ ಈ ಕಾಡು ಬೆಳೆಸುವ ಆದರ್ಶ ಮುಂದುವರೆದು ಬಂದು, ಸ್ವತಂತ್ರ ಭಾರತದಲ್ಲಿ ವನಮಹೋತ್ಸವವೆಂಬ ಉತ್ಸವರೂಪದಲ್ಲಿ ಹಸಿರಿಗೆ ಹೆಚ್ಚು ಪ್ರಾಧಾನ್ಯವನ್ನು ನೀಡುತ್ತ ಬರಲಾಗಿದೆ.

ಹಿಮಾಲಯದ ತಪ್ಪಲಿನ ವೈಷ್ಣೋಯಿಗಳಲ್ಲಿ ಒಂದು ಗಿಡವನ್ನು ಕಡಿಯುವ ಮುನ್ನ ನಾಲ್ಕು ಗಿಡಗಳನ್ನು ನೆಡುವ ಪರಂಪರೆಯೇ ಇದೆ. ವೃಕ್ಷಗಳನ್ನು ಸಂರಕ್ಷಿಸುವ ಚಿಪ್ಕೋ ಆಂದೋಲನದ ಹಿಂದಿರುವ ತತ್ತ್ವವೂ ಇಷ್ಟೇ ಬೃಹತ್ತಾದುದು. ಭಗವದ್ಗೀತೆಯಲ್ಲಿ ಭಗವಂತನೂ ಹೇಳಿದ್ದಾನೆ "ಅಶ್ವತ್ಥಃ ಸರ್ವ ವೃಕ್ಷಾಣಾಂ". ಧಾರ್ಮಿಕವಾಗಿಯೂ, ಸಾಂಸ್ಕೃತಿಕವಾಗಿಯೂ, ವೈಜ್ಞಾನಿಕವಾಗಿಯೂ ಅತಿಮಹತ್ತರವಾದ ಈ ವೃಕ್ಷ ಸಂರಕ್ಷಣೆಯ ದೃಷ್ಟಿಯಿಂದಲೇ ಉಂಟಾಯಿತು "ವೃಕ್ಷೋ ನಾರಾಯಣೋ ಹರಿಃ" ಎಂಬ ಮಾತು.

ಆದರೆ ನಡೆದಿರುವುದನ್ನು ಗಮನಿಸಿದರೆ ಮರಗಳ ಬಗ್ಗೆ ಮನವಿದ್ದರಿಗೆ ತುಸು ಖಿನ್ನತೆಯುಂಟಾಗುವುದು. ನಾಡನ್ನು ಹಿರಿದಾಗಿಸಲು ಕಾಡುಕಡಿಯುವ, ಕಟ್ಟಿಗೆಗೆ ಕಾಡನ್ನು ಬಳಸುವ ಹವ್ಯಾಸ ಹೆಚ್ಚಾಗುತ್ತಿದೆ. ಮರದ ನಿಸ್ವಾರ್ಥ ಜೀವ-ಮಾನವನ ಕ್ಷುಲ್ಲಕ ಅಗತ್ಯಗಳಿಗಾಗಿ ಬಲಿಯಾಗುತ್ತಿದೆ. ಪರಿಸರ ಮಾಲಿನ್ಯ ಅನುಕ್ಷಣವೂ ಹೆಚ್ಚುತ್ತಿರುವ 20 ನೇ ಶತಮಾನದ ಕೊನೆಯ ಭಾಗದಲ್ಲಿ, ಸಸ್ಯಸಂಪದವನ್ನು ಹೆಚ್ಚುಗೊಳಿಸಿಕೊಳ್ಳ ಬೇಕಾದ ಅನಿವಾರ್ಯಸ್ಥಿತಿ ಮನುಷ್ಯನಿಗೆ ಒದಗಿ ಬಂದಿದೆ.

ಇಂತಲ್ಲಿ ಪ್ರತಿಯೊಬ್ಬ ಮನುಷ್ಯನೂ, ತನ್ನ ಸುತ್ತಲ ಸಸ್ಯಸಂಪದವನ್ನು ಸಂರಕ್ಷಿಸಿ, ಹೊಸವನ್ನು ಹುಟ್ಟು ಹಾಕಬೇಕಾದ್ದು ಕರ್ತವ್ಯವೇ ಆಗುತ್ತದೆ. ಈ ಮಾತಿಗೆ ಸಂಘ, ಸಂಸ್ಥೆಗಳು, ಸರಕಾರಗಳೂ ಹೊರತಲ್ಲ. ತಿರುಮಲೆಯ ಪರಿಸರದಲ್ಲಿ ಸಸ್ಯಶ್ಯಾಮಲತೆಯನ್ನುಂಟುಮಾಡಲು ತಿ.ತಿ.ದೇ. ದಿವ್ಯಾರಾಮ ಯೋಜನೆಯೊಡನೆ ಹಲಯೋಜನೆಗಳನ್ನು ಕೈಗೆತ್ತಿಕೊಂಡಿದೆ. ಬಿಸಿಲಿನ ಝಳ ಕಳೆದು, ನೆರಳಿನ, ಮಳೆಯ ತಂಪುಂಟಾಗಲು ಇದು ಅತ್ಯಗತ್ಯವೂ ಹೌದು.

ಗಿಡವನ್ನು ಕಡಿದಲ್ಲಿ ಕೇಶವನೂ ಕೋಪಿಸುವ
ಮರವನ್ನು ಬೆಳೆಸಿದಲ್ಲಿ ಮಾಧವನೂ ಪ್ರೀತನಾಗುವ.

ಏರಿ ಶೇಷಾಚಾರ್ಯರ

# ಶ್ರೀನಿವಾಸ ಕಲ್ಯಾಣ

ಏರಿಶೇಷಾಚಾರ್ಯರ ಕಾಲಕ್ಕೆ ಹಿರಿಯ ದಾಸರಾಯರುಗಳು ಪರಮಾತ್ಮ ತತ್ತ್ವದ ಬಗ್ಗೆ ತಮ್ಮ ಅನುಭವದ ಅಮೃತವನ್ನು ಸವಿಗನ್ನಡದ ಪದಗಳಲ್ಲಿ ತುಂಬಿ, ಸಜ್ಜನರಿಗೆ ಹಂಚಿದ್ದರು. ಶಾಸ್ತ್ರಜ್ಞಾನ ಎಂಬುದು ಕೇವಲ ಪಂಡಿತರ ಸ್ವತ್ತಲ್ಲ; ಮೋಕ್ಷ ಮಾರ್ಗದಲ್ಲಿ ಆಸಕ್ತಿ ಹೊಂದಿದ ಎಲ್ಲರೂ ಇದಕ್ಕೆ ಅರ್ಹರು ಎಂಬುದನ್ನು ಅವರು ತೋರಿಸಿದ್ದರು. ಈ ಪರಂಪರೆಯನ್ನು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ನಂತರ ಬಂದ ಹಲವಾರು ಜ್ಞಾನಿಗಳು ಮುಂದುವರಿಸಿಕೊಂಡು ಬಂದರು.

ಹದಿನೆಂಟನೆ ಶತಮಾನದ ಕಾಲ ಹರಿದಾಸ ಸಾಹಿತ್ಯದ ಬೆಳವಣಿಗೆಯ ಒಂದು ಗಮನಾರ್ಹ ಹಂತವಾಗಿತ್ತು. ಹನುಮದ್ವಿಲಾಸ, ಕಾಳೀಯ ಮರ್ದನ, ಕುಚೇಲೋಪಖ್ಯಾನಗಳಂತಹ ಉತ್ತಮ ಯಕ್ಷಗಾನ ಶೈಲಿಯ ಸುಂದರ ಕೃತಿಗಳನ್ನು ರಚಿಸಿದ ತಿಪ್ಪಣಾರ್ಯರು (ಹಾದ್ರಿನೃಸಿಂಹಾಂಕಿತ,) ನಂತರ ಬಂದ "ವೆಂಕಟೇಶ ಪಾರಿಜಾತ" ರಚಿಸಿದ ಗೋಕಾವಿ ಅನಂತಾರ್ಯರು (ಅನಂತಾದ್ರೀಶ) ಮತ್ತು ಪರಮ ಭಕ್ತೆಯರಾದ ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ–ಇವರೆಲ್ಲಾ ಹದಿನೆಂಟು – ಹತ್ತೊಂಬತ್ತನೇ ಶತಮಾನದ ಗಮನಾರ್ಹ ಕೃತಿಕಾರರು ಎನಿಸಿಕೊಂಡಿದ್ದಾರೆ.

ಶ್ರೀನಿವಾಸ ಕಲ್ಯಾಣ ಕೃತಿಯ ಕರ್ತೃ ಏರಿ ಶೇಷಾಚಾರ್ಯರು. ಈ ಮಹಾನುಭಾವರ ಸಾಲಿನಲ್ಲಿ ಗಣ್ಯರಾದವರು. ತಿರುಪತಿ ಶ್ರೀನಿವಾಸನ ಸ್ವಪ್ನ ದರುಶನ ಹಾಗೂ ಆತನ ಸೂಚನೆಯಿಂದ ಪ್ರಭಾವಿತರಾದ ಆಚಾರ್ಯರು ಶ್ರೀನಿವಾಸ ಕಲ್ಯಾಣವನ್ನು ನವರಾತ್ರಿಯ ಕಾಲದಲ್ಲಿ ತಿರುಪತಿಯಲ್ಲೇ ರಚಿಸಿದರು.

ಹದಿನೆಂಟನೆಯ ಶತಮಾನದ ಉತ್ತರಾರ್ಧದ ಕಾಲ. ಧಾರವಾಡ ಜಿಲ್ಲೆಯ ಏರಿ ಒಂದು ಪುಟ್ಟ ಗ್ರಾಮ. ಆ ಪ್ರದೇಶ ಅಂದಿನ ಗದ್ವಾಲ್ ಸಂಸ್ಥಾನದ ಆಳ್ವಿಕೆಗೆ ಸೇರಿತ್ತು. ಅಲ್ಲಿನ ಮುದ್ಗಲ ಕೃಷ್ಣಾ ಚಾರ್ಯರು ತುಂಬ ಸಾತ್ತ್ವಿಕರೂ ಜ್ಞಾನಿಗಳೂ ಆಗಿದ್ದರು. ಅವರ ಪತ್ನಿ ರುಕ್ಮಿಣೀಬಾಯಿಯವರೂ ಅಷ್ಟೆ. ಸಾಧ್ವಿ ಹಾಗೂ ಸದಾಚಾರ ಶೀಲೆ. ಈ ದಂಪತಿಗಳ ಹಿರಿಯಮಗ ಏರಿ ವೆಂಕಟೇಶಾಚಾರ್ಯರು ಉತ್ತಮ ವಿದ್ವಾಂಸರು, ಅಂದು ಉತ್ತರಾದಿಮಠದ ಪೀಠದಲ್ಲಿದ್ದ ಶ್ರೀ ಸತ್ಯಸಂಧ ತೀರ್ಥರ ಆದರ, ಪರಮಾನುಗ್ರಹಗಳಿಗೆ ಪಾತ್ರರಾಗಿದ್ದವರು. ಎರಡನೆಯ ಮಗ ಶೇಷಾಚಾರ್ಯರು ಬಾಲ್ಯದಿಂದಲೂ ಮೃದು ಸ್ವಭಾವದವರೂ ಭಗವದ್ಭಕ್ತರೂ ಎನಿಸಿದ್ದರು.

ಏರಿ ಸಹೋದರರು ತಮ್ಮ ತಂದೆ ಹಾಗ ಸತ್ಯಸಂಧ ತೀರ್ಥರಿಂದ ಮಾಡಿದ ಸಚ್ಛಾಸ್ತ್ರ ಶ್ರವಣ, ಮನನ. ಅಧ್ಯಯನಗಳಿಂದ ಉತ್ತಮ ಕೀರ್ತಿಯನ್ನು ಪಡೆದಿದ್ದರು. ಹಲವಾರು ಶಿಷ್ಯರು ಸಹಜವಾಗಿಯೇ ಇವರ ಕಡೆ ಜ್ಞಾನದ ತಣಿವನ್ನು ತೀರಿಸಿಕೊಳ್ಳಲು ಧಾವಿಸುತ್ತಿದ್ದರು. ಅಣ್ಣ ವೆಂಕಟೇಶಾಚಾರ್ಯರ ಅಪ್ರತಿಮ ಪಾಂಡಿತ್ಯ, ಆಳವಾದ ಶಾಸ್ತ್ರಜ್ಞಾನ, ಸಾಧನೆ ತಮ್ಮನ ಮೇಲೆ ತುಂಬಾ ಪ್ರಭಾವ ಬೀರಿದ್ದಿತು. ಶೇಷಾಚಾರ್ಯರು ಅವರಲ್ಲಿಯೇ ತಮ್ಮ ಕಲಿಕೆಯನ್ನು ಮುಂದುವರಿಸಿ ಮೋಕ್ಷ ಮಾರ್ಗದ ಕಡೆ ಆಸಕ್ತರಾಗಿ, ಯಾವಾಗಲೂ ಪರಮಾತ್ಮನ ಸ್ಮರಣೆಯಲ್ಲಿ ಕಾಲಕಳೆಯುತ್ತಿದ್ದರು. ಅವಧೂತರಂತೆ, ಬೂದಿ ಮುಚ್ಚಿದ ಕೆಂಡದಂತೆ ಗೂಢವಾಗಿ ಇವರು ಸಾಧನಾಶೀಲರಾಗಿದ್ದರು.



ಮನೆದೇವರಾದ ತಿರುಪತಿ ಶ್ರೀನಿವಾಸನ ಸೇವೆಗೆಂದು ಒಂದುಸಲ ತಿರುಪತಿಗೆ ಅವರು ಹೋಗಿದ್ದರು. ಏಳು ಬೆಟ್ಟದೊಡೆಯ, ಕರುಣಾಸಿಂಧು, ಶ್ರೀನಿವಾಸ ಅವರಿಗೆ ಕನಸಿನಲ್ಲಿ ದರುಶನ ನೀಡಿದ ಇದನ್ನು ಆಚಾರ್ಯರು ಸ್ವಪ್ನ ಪದ್ಯದಲ್ಲಿ ವರ್ಣಿಸಿದ್ದಾರೆ.

'.........ನಂದನನೆ ಕೇಳೆಂದು ಕೃಪೆಯಿಂದ।
ಚೆಂದದಿಂದಲಿ ಮಾತನಾಡುತ ಮಾಡು
ಸ್ತೋತ್ರವ।.........'

'ಮಗು, ನಿನ್ನ ಇಷ್ಟಾರ್ಥ ಕೊಡುತ್ತೇನೆ. ನನ್ನ ಮಹಾತ್ಮೆಯನ್ನು ದಿನಾ ಒಂದು ಹಾಡಿನಂತಾದರೂ ರಚಿಸಿ ಹಾಡು; ನಿನಗೆ ಸಾನೇ ವಾಕ್, ರಚನಾಶಕ್ತಿಯನ್ನು ನೀಡುತ್ತೇನೆ' ಎಂದ ಪರಮಾತ್ಮ. ತನ್ನ ಪ್ರಿಯ ಭಕ್ತರಾದ ಆಚಾರ್ಯರಲ್ಲಿ ತಾನೇ ನಿಂತು, ಮಾಡಿ–ಮಾಡಿಸಿದ, ಸುಂದರವಾದ ಕೃತಿ ಶ್ರೀನಿವಾಸ ಕಲ್ಯಾಣ.

ಶ್ರೀನಿವಾಸನ ದಿವ್ಯ ಸುಂದರ ವಿಗ್ರಹವನ್ನು ಮನದಲ್ಲಿಯೇ ನೆನೆಯುತ್ತ, ಪೂರ್ತಿ ಬೆಟ್ಟವನ್ನು ಹತ್ತಿ ಬಂದ ಮೇಲೆ ಅವರಿಗೆ ದೇವಾಲಯದೊಳಗೆ

**ಶ್ರೀ ಟಿ. ಎಸ್. ಪದ್ಮನಾಭರಾವ್**

ಸುಲಭ ಪ್ರವೇಶ ದೊರೆಯಲಿಲ್ಲವಂತೆ. ಹರಕು ಬಟ್ಟೆಯ, ಅವಧೂತ ವೇಷದ ಈ ಬಡ ಹಾರುವನನ್ನು ದೇವಾಲಯದ ಸೇವಕರು ಬಾಗಿಲಲ್ಲಿಯೇ ತಡೆದರಂತೆ. ಸ್ವಾಮಿಗೆ ಆಗ ಅಭಿಷೇಕ ನಡೆಯುತ್ತಿತ್ತು. ಆಚಾರ್ಯರು ಶ್ರೀನಿವಾಸನನ್ನೇ ನೆನೆಯುತ್ತ ಅಲ್ಲಿಯೇ ನಿಂತು ಬಿಟ್ಟರು. ಆಗ ಇದ್ದಕ್ಕಿದ್ದಂತೆ ಗರ್ಭಗುಡಿಯಲ್ಲಿ ದೇವರತಲೆಯ ಮೇಲೆ ನೀರು ಬೀಳುವುದು ನಿಂತೇ ಹೋದದ್ದನ್ನು ದೇವಾಲಯದ ಅಧಿಕಾರಿಗಳು ಕಂಡರು. ಏನೋ ಅಪಚಾರವಾಗಿದೆ ಎಂದು ವಿಚಾರಮಾಡಲಾರಂಭಿಸಿದರು. ಪ್ರಮುಖರಿಗೆ ಇದು ತಿಳಿಯಿತು. ಬಾಗಿಲ ಹೊರಗೆ ಕಾದು ನಿಂತ ಆಚಾರ್ಯರ ತೇಜಸ್ಸನ್ನು ಕಂಡ ಅವರೆಲ್ಲ ಇವರು ಯಾರೋ ಮಹಾತ್ಮರೋ, ಜ್ಞಾನಿಗಳೋ ಇರಬಹುದೆಂದು ತಿಳಿದು ಅವರ ಕ್ಷಮೆ ಬೇಡಿ ಒಳಗೆ ಕರೆತಂದರು. ಆಚಾರ್ಯರಂತಹ ಅಂತರಂಗ ಭಕ್ತರು ಒಳಗೆ ಬಂದೊಡನೆಯೇ ಅಭಿಷೇಕ ಸಲಿಲ ಸಲೀಲವಾಗಿ ಶ್ರೀನಿವಾಸನ ಮೈ ತೊಳೆಯಿತಂತೆ. ದೇವಾಲಯದ ಅಧಿಕಾರಿಗಳು ಆಚಾರ್ಯರನ್ನು ಗೌರವಿಸಿದರು. ದೇವದೇವನ ದಿವ್ಯ ದರುಶನ ಪಡೆದರು. ಹೊರಬಂದ ಶೇಷಾಚಾರ್ಯರು ಪ್ರಸಾದ ಪಡೆದುಕೊಂಡರು. ದೊರೆತ ಪ್ರಸಾದದಲ್ಲಿ ಏನೋ ಸಿಕ್ಕಿದಂತಾ

ನೋಡುತ್ತಾರೆ, ಸಾಲಗ್ರಾಮ ಶಿಲೆಯ ಶ್ರೀನಿವಾಸನ ಸುಂದರ ಮೂರುತಿ! ಅಣು-ರೇಣು-ತೃಣ-ಕಾಷ್ಠ ಎಲ್ಲ ಕಡೆ ಸಾನಿದ್ದೇನೆ ಎಂದು ದೇವರು ಅವರಿಗೆ ಪ್ರತ್ಯಕ್ಷವಾಗಿ ತೋರಿಸಿದ್ದ. ಆಚಾರ್ಯರ ಹೃದಯ ಭಕ್ತಿಯಿಂದ ಒದ್ದೆಯಾಗಿತ್ತು, ಭಾರವಾಗಿತ್ತು. ಜಗನ್ನಿಯಾಮಕನ ಭೂಮ ವ್ಯಾಪ್ತಿ ಕ್ಷಣ ಕ್ಷಣಕ್ಕೂ ಅವರ ಅನುಭವಕ್ಕೆ ಬರುತ್ತಿತ್ತು.

ತಿರುಪತಿಯಲ್ಲಿ ಅವರು ಕೆಲಕಾಲ ನಿಂತರು. ಶ್ರೀನಿವಾಸರ ಆಜ್ಞೆಯಂತೆ ಶ್ರೀನಿವಾಸ ಕಲ್ಯಾಣ ವೈಭವದ ಕಥೆಯನ್ನು ಧಾರವಾಡದ ಗಂಡು ಕನ್ನಡದಲ್ಲಿ ಸುಂದರವಾದ ಪದ್ಯಗಳಲ್ಲಿ ಮನದಣಿಯ ಹಾಡಿದರು. ಭವಿಷ್ಯೋತ್ತರ ಪುರಾಣದಲ್ಲಿ ಹೇಳಿದ ವೆಂಕಟೇಶನ ಮಹಿಮೆಯನ್ನು ಶ್ರೀ ಮಧ್ವಾಚಾರ್ಯರ ತತ್ತ್ವವಾದದ ಭವ್ಯ ಹಿನ್ನಲೆಯಲ್ಲಿ ಶೇಷಾಚಾರ್ಯರು ರಚಿಸಿದರು.

ಮುಪ್ಪಿನಲ್ಲಿ ಶೇಷಾಚಾರ್ಯರು ತಮ್ಮ ಸಂಚಾರ ನಿಲ್ಲಿಸಿ ತಮ್ಮ ಅಣ್ಣ ಹಾಗೂ ಗುರು ವೆಂಕಟೇಶಾಚಾರ್ಯರು ನೆಲೆಸಿದ್ದ ಕೋಲಾರ ಜಿಲ್ಲೆ ಚಿಂತಾಮಣಿ ತಲುಪಿದರು. ತಮ್ಮ ಸಾಧನೆಯನ್ನು ಅವರು ಅಲ್ಲೇ ಮುಂದುವರಿಸಿದರು. ವೆಂಕಟೇಶಾಚಾರ್ಯರು ದೇಹತ್ಯಾಗ ಮಾಡಿದಾಗ ಅವರು ಇರುತ್ತಿದ್ದ - ಸದ್‌ಗ್ರಂಥಗಳ ಪ್ರವಚನ ಮಾಡುತ್ತಿದ್ದ-ದಿವಾನ್ ಪೂರ್ಣಯ್ಯನವರ ಧರ್ಮಛತ್ರದ ಆವರಣದಲ್ಲಿ ಅವರ ಭೌತಿಕ ಶರೀರವನ್ನು ಅಗ್ನಿಗೆ ಅರ್ಪಿಸಿದರು. ಅವರ ನೆನಪಿಗೆ ಪುಟ್ಟ ಗುಡಿಯೊಂದನ್ನು ನಿರ್ಮಿಸಿದರು.

ಇದಾದ ಮೇಲೆ ಅವರು ಬೆಂಗಳೂರಿನ ಗುಂಡೋಪಂತರ ಛತ್ರದಲ್ಲಿ ಹಲವು ದಿನ ಕಳೆದರಂತೆ. ಅಲ್ಲಿಂದ ಬೆಂಗಳೂರು ಜಿಲ್ಲೆಯ ಸೂಲಿಬೆಲೆ ಗ್ರಾಮಕ್ಕೆ ಬಂದು ತಮ್ಮ ಕೊನೆಯ ದಿನಗಳನ್ನು ಅಲ್ಲಿಯೇ ಕಳೆದರಂತೆ. ಆಚಾರ್ಯರ ಪುತ್ರರಾದ ಕೃಷ್ಣಾಚಾರ್ಯ ಹಾಗೂ ಶ್ರೀನಿವಾಸಾಚಾರ್ಯ ಅವರ ಬಗ್ಗೆ ನಮಗೇನೂ ತಿಳಿದು ಬಂದಿಲ್ಲ. ಸು. 1830 ಕ್ಕೆ ಸರಿಹೊಂದುವ ಪ್ಲವ ಸಂವತ್ಸರ ಜ್ಯೇಷ್ಠ ಶುದ್ಧ ಅಷ್ಟಮಿಯ ದಿನ ಆಚಾರ್ಯರು ಅಸ್ತಂಗತರಾದಂತೆ. ತಮ್ಮ ಚಿಕ್ಕಪ್ಪನ ಕೊನೆಯ ದಿನಗಳಲ್ಲಿ ಅವರ ಬಳಿಯಲ್ಲಿಯೇ ಇದ್ದ ದಿಗ್ವಿಜಯ ರಾಮಾಚಾರ್ಯರು ಅವರ ಅಂತ್ಯಕ್ರಿಯೆಗಳನ್ನು ನೆರವೇರಿಸಿದರಂತೆ.

ಶ್ರೀನಿವಾಸ ಕಲ್ಯಾಣದ ಮೂಲ ಪ್ರತಿಯನ್ನು ತಯಾರಿಸಿದವರು ದಿಗ್ವಿಜಯ ರಾಮಾಚಾರ್ಯರು ಎನ್ನಿಸುತ್ತದೆ. ಹಸ್ತಪ್ರತಿಯ ಕೊನೆಯಲ್ಲಿ 'ಶ್ರೀಕರೇಶ ವಿಠಲ' ಎಂದು ತಮ್ಮ ಹೆಸರು ಹೇಳಿಕೊಂಡಿದ್ದಾರೆ. ಈ ಸಂಪಾದಕನಿಗೆ ದೊರೆತ ಇನ್ನೊಂದು ಹಸ್ತ ಪ್ರತಿ ಇದೇ ವಂಶದಲ್ಲಿ ಬಂದ ಅಂಬಾಜಿರಾಯರು ನಕಲು ಮಾಡಿದ್ದು. ಇವರು ಬಹುಶಃ ದಿಗ್ವಿಜಯ ರಾಮಾಚಾರ್ಯರ ಮೊಮ್ಮಗ ಕೃಷ್ಣಾಚಾರ್ಯರ ಮಗ ಇರಬಹುದು.

ಏರಿ ವಂಶದಲ್ಲಿ ಹಲವಾರು ಜ್ಞಾನಿಗಳು ಆಗಿ ಹೋಗಿದ್ದಾರೆ. ದಿಗ್ವಿಜಯ ರಾಮಾಚಾರ್ಯರ ಮೂರನೆಯ ಮಗ ವಾಸುದೇವಾಚಾರ್ಯರು ಮಂತ್ರಾಲಯ ರಾಘವೇಂದ್ರಸ್ವಾಮಿಗಳ ಅಪ್ರತಿಮ ಭಕ್ತರು. ಇವರು ರಾಘವೇಂದ್ರ ಪಾದುಕಾಷ್ಟಕ ಎಂಬ ಸ್ತೋತ್ರವನ್ನು ರಚಿಸಿದ್ದಾರೆ. ಶ್ರೀಕರೇಶ ವಿಠಲರು ದೇವರನಾಮಗಳನ್ನೂ ರಚಿಸಿದ್ದಿರಬಹುದು ಎನಿಸುತ್ತದೆ. ಈ ಬಗ್ಗೆ ಹೆಚ್ಚು ತಿಳಿದು ಬಂದಿಲ್ಲ

ಭವಿಷ್ಯೋತ್ತರ ಪುರಾಣದಲ್ಲಿ ಹದಿನಾಲ್ಕು ಅಧ್ಯಾಯಗಳಲ್ಲಿ ಶ್ರೀ ವೆಂಕಟೇಶನ ಮಹಾತ್ಮ್ಯೆಯನ್ನು ಹೇಳಲಾಗಿದೆ. ಇದರಲ್ಲಿ ಶ್ರೀನಿವಾಸನ ಕಲ್ಯಾಣ ವೈಭವದ ಘಟ್ಟದವರೆಗೆ ಮಾತ್ರ ಕಥೆಯನ್ನು ಶೇಷಾಚಾರ್ಯರು ತಮ್ಮ ಕೃತಿಯಲ್ಲಿ ಬಳಸಿದ್ದಾರೆ. ದ್ವಿಪದಿ, ಪದ್ಯ, ವಚನ, ಕನ್ನಡಶ್ಲೋಕ (ಸವಾಯಿ) ಅಲ್ಲಲ್ಲಿ ಬರುವ ಸಂಸ್ಕೃತ ಶ್ಲೋಕಗಳಿಂದ ಕೂಡಿದ ಈ ನಿರೂಪಣಾ ಶೈಲಿ ಹರಿಕಥಾ ಪ್ರವಚನಕ್ಕೆ ಹೇಳಿ ಮಾಡಿಸಿದಂತಿದೆ. ಇದನ್ನು "ಯಕ್ಷಗಾನ ಶೈಲಿ" ಎಂದೂ ಹೇಳುವುದುಂಟು.

ಈ ಕೃತಿ ಭವಿಷ್ಯೋತ್ತರ ಪುರಾಣ ಶ್ಲೋಕಗಳ ಕನ್ನಡಾನುವಾದ ಎಂಬಂತೆ ಕೆಲವುಕಡೆ ತೋರಿದರೂ,ಇದರಲ್ಲಿ ಆಚಾರ್ಯರ ವೈಯಕ್ತಿಕ ಕೊಡುಗೆ ಬಹಳಷ್ಟಿದೆ. ಉದ್ದಾಮ ಶಾಸ್ತ್ರ ಜ್ಞಾನವಿದ್ದರೂ, ವಿನಯ ಅವರಲ್ಲಿ ಎಂದೂ ಕಡಿಮೆಯಾಗಲಿಲ್ಲ. ಫಲಶ್ರುತಿಯ ಅವರ ಮಾತುಗಳು ಹೀಗಿವೆ :-

.........ತ್ವರೆಯಿಂದ ಮಾಡೆಂದು ವರಗಳನೆ
ಕೊಟ್ಟಾ
ಖರೆಯಾಯಿತೀ ಮಾತು ಶ್ರೀಹರಿಯ
ಸತ್ಯವಾಗೀ।
ಬರೆದೆ ಹೊರತೂ ಈ ಗ್ರಂಥ ಮಾಡಿದವನಲ್ಲಾ॥
(ಶ್ರೀನಿವಾಸ ಕಲ್ಯಾಣ)

-"ಪರಮಾತ್ಮನ ದಿವ್ಯಾನುಗ್ರಹದಿಂದ ಈ ಗ್ರಂಥವನ್ನು ತಾನು ಲಿಪಿಕಾರನಂತೆ ಬರೆದದ್ದು ಮಾತ್ರ, ರಚಿಸಿದ್ದಲ್ಲ'' ಎನ್ನುವ ಅವರ ಉದಾತ್ತ ವಿನಯ ಉತ್ತಮ ಭಗವದ್ಭಕ್ತರಿಗೆ ಮಾತ್ರ ಇರುವಂತಹುದು.

ಈ ಕೃತಿಯಲ್ಲಿ ಸಂದರ್ಭಕ್ಕೆ ತಕ್ಕಂತೆ ಕಥಾಭಾಗದ ತಾತ್ತ್ವಿಕ ಹಿನ್ನೆಲೆ, ಶ್ರೀಮಧ್ವಾಚಾರ್ಯರ ತತ್ತ್ವವಾದದ (ದ್ವೈತ ಸಿದ್ಧಾಂತ) ಮೂಲ ತತ್ತ್ವಗಳಿಗೆ ಈ ಘಟನೆಗಳನ್ನು ಸಮನ್ವಯ ಮಾಡುವ ರೀತಿ, ಇವು ಈ ಕೃತಿರಚನೆಯ ಹಿಂದಿರುವ ಉದ್ದಿಶ್ಯ ಘನವಾದದ್ದು ಎಂಬುದನ್ನು ತೋರಿಸಿ ಕೊಡುತ್ತದೆ.

ಪರಬ್ರಹ್ಮನಾದ ಶ್ರೀನಿವಾಸನ ಸರ್ವೋತ್ತಮತ್ತ್ವ, ಅಚಿಂತ್ಯ, ಅದ್ಭುತ ಮಹಿಮೆಗಳಲ್ಲಿ ದೃಢವಾದ ಸ್ನೇಹವೇ ಭಕ್ತಿ. ಇದರಿಂದಲೇ ಮೋಕ್ಷಸಾಧನೆ ಆಗುತ್ತದೆ. ಪರಮಾತ್ಮನ ಭಕ್ತರ ಸಹವಾಸವೇ ನಮ್ಮನ್ನು ಈ ಮಾರ್ಗದ ಕಡೆ ಕರೆದೊಯ್ಯುತ್ತದೆ. ಈ ಜಗತ್ತಿನಲ್ಲಿ ನಿಸರ್ಗ ಸಹಜವಾಗಿ ಪ್ರತಿಯೊಂದು ವಸ್ತುವೂ ಒಂದಕ್ಕಿಂತ ಇನ್ನೊಂದು ಬೇರೆಯಾದದ್ದು. ಆದರೆ ಇವುಗಳಲ್ಲಿ ವ್ಯಾಪ್ತನಾದ ಪರಮಾತ್ಮನ ರೂಪಗಳಿಗೆ ಪರಸ್ಪರ ಭೇದವಿಲ್ಲ. ಶ್ರೀಹರಿಯೇ ಎಲ್ಲ ಕೆಲಸಗಳನ್ನು ಜೀವಿಗಳಲ್ಲಿ ನಿಂತು ಮಾಡಿಸುತ್ತಾನೆ. ಪಂಚಭೇದ, ತಾರತಮ್ಯ- ಇವುಗಳ ಸರಿಯಾದ ಜ್ಞಾನ ಪರಮಾತ್ಮನ ಮಹಿಮೆಯನ್ನರಿತ ದೃಢವಾದ ಸ್ನೇಹ (ಭಕ್ತಿ) ಇವುಗಳಿಂದಲೇ ಲೋಕೋದ್ಧಾರ ಸಾಧ್ಯ ಎಂಬುದು ಮಧ್ವಾಚಾರ್ಯರ ಸಿದ್ಧಾಂತದ ಸ್ಥೂಲವಾದ ಪ್ರಮೇಯಗಳು. ಇವುಗಳನ್ನು ತಮ್ಮ ಕೃತಿಯಲ್ಲಿಯೂ ಶೇಷಾಚಾರ್ಯರು ಅಳವಡಿಸಿದ್ದಾರೆ. ವಸ್ತುತಃ ಭವಿಷ್ಯೋತ್ತರ ಪುರಾಣ ಕಥೆಗೂ ಆಚಾರ್ಯರ ಕೃತಿಯ ವರ್ಣನೆಗೂ ವ್ಯತ್ಯಾಸವಿಲ್ಲದಿದ್ದರೂ ಕಥೆಗೆ ಸುಂದರವಾಗಿ ಹೊಂದಿಕೊಳ್ಳುವಂತೆ, ಅಲ್ಲಲ್ಲಿ ಆರತಿ ಹಾಡು, ಸೂಚನೆಹಾಡು, ಭೂಮದಹಾಡು, ಕಣಿ ಹೇಳುವ ಪದ-ಇವನ್ನು ಅಳವಡಿಸಿ ಹೆಣ್ಣು ಮಕ್ಕಳು ಇವನ್ನು ಭಕ್ತಿಭಾವದಿಂದ ಹಾಡಿಕೊಂಡು ತಮ್ಮ ಗೃಹಕೃತ್ಯಗಳ ಮಧ್ಯೆ ಪರಮಾತ್ಮನ ಗುಣಗಾನ ಮಾಡುವ ಸುಂದರ ಅವಕಾಶ ಮಾಡಿ ಕೊಟ್ಟಿದ್ದಾರೆ.

ಈ ಕೃತಿಯನ್ನು ಪೂರ್ವಾರ್ಧ ಮತ್ತು ಉತ್ತರಾರ್ಧಗಳಾಗಿ ವಿಂಗಡಿಸಲಾಗಿದೆ. ಭೃಗುಋಷಿಗಳು ಪರಮಾತ್ಮನ ಸರ್ವೋತ್ತಮತ್ತ್ವವನ್ನು ತಿಳಿದು ಬಂದು, ವಸಿಷ್ಠ ಮೊದಲಾದ ಋಷಿಗಳಿಗೆ ಶ್ರೀಹರಿಯೇ ಯಜ್ಞಫಲದ ಭೋಕ್ತಾ ಎಂದು ತಿಳಿಸುವ ಪ್ರಸಂಗದಿಂದ ಮೊದಲಾಗಿ ಲಕ್ಷ್ಮೀ ವಿರಹ, ವೆಂಕಟಾದ್ರಿಯಲ್ಲಿ ಶ್ರೀನಿವಾಸ ನೆಲೆನಿಂತದ್ದು, ಅತ್ತ ಪದ್ಮಾವತೀಜನನ, ವನದಲ್ಲಿ ನಾರದರೊಡನೆ ಸಖೀಜನಸಹಿತ ಪದ್ಮಾವತಿಯ ಭೇಟಿ-ಇಲ್ಲಿಯವರೆಗೆ ಪೂರ್ವಾರ್ಧದ ಕಥೆ.

ಶ್ರೀನಿವಾಸ ಪದ್ಮಾವತಿಯರ ಭೇಟಿಯಿಂದ ಕಲ್ಯಾಣ ವೈಭವದವರೆಗಿನ ಕಥೆ ಉತ್ತರಾರ್ಧ ಭಾಗದಲ್ಲಿ ಮೂಡಿ ಬಂದಿದೆ.

ಈ ಸುಂದರವಾದ ಕೃತಿಯಲ್ಲಿ ಉತ್ತಮ ಕಾವ್ಯ ಗುಣವನ್ನು ಹಲವು ಕಡೆ ನಾವು ನೋಡಬಹುದಾ

(34ನೇ ಪುಟ ನೋಡಿ)

# ಕರ್ನಾಟಕದ ಪ್ರಾಚೀನ ಸಂಸ್ಕೃತಿ

ಕರ್ನಾಟಕದ ಸಾಮಾಜಿಕಪರಿಸ್ಥಿತಿಯು ಸುಮಾರು ಎರಡು ಸಾವಿರವರ್ಷದ ಶಾಸನಗಳು, ಕಾವ್ಯಗಳು, ನಾಟ್ಯಗಳು ಮತ್ತು ಜಾನಪದ ಕಥಾಸಮೂಹಗಳಿಂದ ವಿಶದೀಕೃತವಾಗಿದೆ. ಭಾರತೀಯ ಸಮಾಜ ಸಂಸ್ಥೆಗಳಂತೆಯೇ ಕರ್ನಾಟಕದ ಸಮಾಜವ್ಯವಸ್ಥೆಗಳೂ ಸಾಮಾನ್ಯವಾಗಿ ಶೀಘ್ರಗತಿಯ ಅಥವಾ ಕ್ರಾಂತಿಕಾರಕ ಬದಲಾವಣೆಗಳಿಗೆ ಒಳಗಾಗುವುದಿಲ್ಲ. ಅದು ನಿಧಾನವಾಗಿ ವಿಕಾಸಗೊಳ್ಳುವುದು. ಭಿನ್ನ ಭಿನ್ನ ದೇಶೀಯಪರಿಸರಗಳಿಂದ ಮತ್ತು ವಿವಿಧ ಕಾಲಿಕ ರಾಜಕೀಯ ವಾತಾವರಣದಿಂದ ಅಲ್ಪಸ್ವಲ್ಪ ವ್ಯತ್ಯಾಸವಾಗಬಹುದೇ ವಿನಾ ಮೂಲಭೂತವಾದ ಮೌಲ್ಯಗಳು ಬಹುಮಟ್ಟಿಗೆ ಪರಿವರ್ತಿತವಾಗುವುದಿಲ್ಲ. ಅವುಗಳ ವಿವಿಧ ರೂಪರೇಖೆಗಳನ್ನು ಸ್ಥೂಲವಾಗಿ ಪರಿಶೀಲಿಸಬಹುದು. ಅದರಿಂದ ಕರ್ನಾಟಕ ಸಂಸ್ಕೃತಿಯ ಪ್ರತ್ಯಕ್ಷ ಪರಿಚಯವಾಗುವುದು.

ಕನ್ನಡನಾಡು ಕಾವೇರಿಯಿಂದ ಗೋದಾವರಿಯ ವರೆಗೆ ಪ್ರಸರಿಸಿದ್ದಾ ನಾಡು 'ಆ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯ ವಿಲೀನ ವಿಶದ ವಿಷಯ ವಿಶೇಷ'ವಾಗಿತ್ತು. ಅದರ ವೈಭವವನ್ನು ಬಾಯಿ ತುಂಬ ಹೊಗಳಿ ಅದರ ಪ್ರತ್ಯಕ್ಷ ಪರಿಚಯವನ್ನು ಹೊಂದದ ಕವಿಗಳಿಲ್ಲ. ಕನ್ನಡದ ಕವಿಕುಲಾಗ್ರಣಿಯಾದ ಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಕುರುಜಾಂಗಣವನ್ನು ವರ್ಣಿಸುವ ಮುಂದಿನ ಪದ್ಯಗಳಲ್ಲಿ ವಿಶದೀಕರಿಸಿದ್ದಾನೆ.

ಜಲಜಲನೊಳ್ಕುತಿರ್ಪ ಪರಿಕಾಲ್
ಪರಿಕಾಲೊಳುರ್ಕೆ ಗೊಂಡ ನೈ
ದಿಲ ಪೊಸವೂ, ಪೊದಳ್ದ ಪೊಸನೈದಿಲ
ಕಂಪನೆ ಬೀರಿಕಾಯ್ತ್ತ ಕೈ
ಶೊಲೆಯೊಳೆ ಜೋಲ್ವ ಶಾಳಿ
ನವಶಾಳಿಗೆ ಪಾಯ್ವ ಶುಕಾಳಿ......
ಯ್ವೊಲಗಳನೊಪ್ಪಿ ತೋರೆ
ಸಿರಿ ನೋಡುಗು ಮಾವಿಷಯಾಂತರಾಳದೊಳ್
ಆವಲರುಂ ಪಣ್ಣುಂ ಬೀ
ತೋವವು ಗಡ, ಬೀಯುವಲ್ಲಿ ಮಲ್ಲಿಗೆಗಳುಮಿ
ವ್ಮಾವುಗಳುಮೆಂದೊಡಿಂ ಪೆರ
ತಾವುದು ಸಂಸಾರ ಸಾರ ಸರ್ವಸ್ವ ಫಲಂ

ಬನವಾಸಿಯ ವರ್ಣನೆಯಂತೂ ದೇಶದ ವೈಭವವನ್ನು ಮತ್ತಷ್ಟು ಸ್ಫುಟೀಕರಿಸುತ್ತದೆ.

ಸೊಗಯಿಸಿ ಬಂದ ಮಾಮರನೆ
ತಳ್ತಲೆವಳ್ಳಿಯೆ, ಪೂತಜಾತಿಸಂ
ಪಗೆಯೆ, ಕುಕಿಲ್ವ ಕೋಗಿಲೆಯೆ,
ಪಾಡುವ ತುಂಬಿಯೆ ನಲ್ಲರೊಳ್ಮೊಗಂ
ನಗೆವೊಗದೊಳ್ ಪಳಂಚಲೆಯೆ
ಕೂಡುವ ನಲ್ಲರೆ ನೋಳ್ಪೊಡಾವಲೆ
ಲೆಟ್ಟುಗಳೊಳಮಾದ ನಂದನ
ಬನಂಗಳೊಳಂ ಬನವಾಸಿ ದೇಶದೊಳ್

ಅದನ್ನೇ ಚಿಕ್ಕುಪಾಧ್ಯಾಯನು

ಗಾಡಿಯ ಸೀಮೆ, ಚೆಲ್ವೊಗೆದತಾಣಂ
ಅಲಂಪಿನ ಸಂತೆ ಸೆಂಪುಸಾ
ರ್ದಾಡುವ ಭೂಮಿ, ಸೌಖ್ಯದೆಡೆ
ಪುಣ್ಯದ ಗೊತ್ತು, ವಿನೋದದಾಗರಂ
ಮೋಡಿಯ ಮಂಟಪಂ,
ಸಿರಿಯ ಪೆರ್ಚಿಗೊಳ್ಮನೆ ಮುಕ್ತಿಕಾಂತೆ ಕೈ
ಗೂಡುವ ಬೀಡು, ಕನ್ನಡನಾಡು
ವಿರಾಜಿಪುದೆಂತು ಬಣ್ಣಿಪೆಂ

ಎಂದು ವಿವರಿಸಿದರೆ ಬಿ. ಎಂ. ಶ್ರೀ ಯವರು

ಕನ್ನಡನಾಡು ಮುನ್ನೀರ್ ವೊಳಂಗು
ಕರಿನಾಡು, ಮಲೆನಾಡು,
ಬಯಲ ಪೊನ್ನಾಡು
ಚೆಲ್ವಿನ ನೆಲೆ, ಕಣ್ಣಿಳ ಬಲೆ,
ಸುಖಮೆರಚುವ ಬನವಾಸೀ

ಎಂದೂ ವರ್ಣಿಸಿದ್ದಾರೆ. ಶಾಸನ ಕವಿಯ ಅಭಿಪ್ರಾಯದಂತೆ ಅಲ್ಲಿಯ

ಪೊಲನೆಲ್ಲಂ ಗಂಧಶಾಲಿ ಪ್ರಕರ ಪರಿವೃತಂ
ನಂದನ ಶ್ರೇಣಿಯೆಲ್ಲಂ
ಫಳಭಾರಾವಮ್ರ ಚೂತಾವನಿಜವಳಯಿತಂ
ದೀರ್ಘಿಕಾನೀಕಮೆಲ್ಲಂ
ದಳಿತಾಂಭೋಜಾತರೇಣುಸ್ಥಗಿತ ಲಲಿತಂ
ಊರೂರ್ಗಳೆಲ್ಲಂ ಪ್ರಕಾಸಂಕುಳ ಗೋಧಾನ್ಯ
ಪ್ರಕೀರ್ಣಾಂಚಿತಮೆನಲೆಸೆಗುಂ...........

ಅದರ ಜನ ನೃಪತುಂಗನ ಮಾತಿನಲ್ಲಿ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮಗಳು. ಪಂಪನ ಪ್ರಕಾರ ಅಲ್ಲಿಯ ಮಾನಿಸರು ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯ ಲಂಪಿ ನಿಂಪುಗಳ್ಗಾಗರಮಾದ ಮಾನಿಸರೆ! ಅಂತವರಾಗಿ ಪುಟ್ಟಲೇನಾಗಿಯುಂ ತೀರದು. ತೀರದೊಡಂ ಮರಿದುಂಬಿಯಾಗಿ ಮೇಣು ಕೋಗಿಲೆಯಾಗಿ ಅಲ್ಲಿಯ ವನಗಳಲ್ಲಿ ಹುಟ್ಟಬೇಕು. ಒಂದು ಶಾಸನದ ಪ್ರಕಾರ ಅಲ್ಲಿಯ ಜನರು;

ಭೋಗೋಪಭೋಗದಿಂದನು
ರಾಗದಿನ್ ಅನವದ್ಯವೃತ್ತಿಯಿಂ ಸುಕೃತಶತಕೋ
ದ್ಯೋಗದಿನಿರ್ಪ ಜನಂಗಳ್

ಅವರು ಸಾರಂ ಅನಂಗಜಂಗಮ ಲತಾ ಲಲಿತಾಂಗಿಯರಿಂದಮಲ್ತೆ ಸಂಸಾರಂ ಎಂದು ಅರಿತಿದ್ದರು. ಆದರೂ ಭೋಗದ ಮಿತಿಯೂ ತ್ಯಾಗದ ಹಿತವೂ ಅವರಿಗೆ ತಿಳಿಯದಿರಲಿಲ್ಲ.

ಧರ್ಮಂ ಪ್ರಧಾನಂ, ಅರ್ಥಂ
ಧರ್ಮಾಂಘ್ರಿಪ ಫಳಂ ಅದರ್ಕೆ ರಸಮದು
ಕಾಮಂ

ಎಂಬುದನ್ನು ಅವರು ಚೆನ್ನಾಗಿ ಅರಿತಿದ್ದರು.

ಕರ್ನಾಟಕದ ಮೇಲಿನ ಧರ್ಮವು ಮೂರು ಶಾಖೆಗಳಲ್ಲಿ ವ್ಯಕ್ತವಾಗಿದೆ. ನನ್ನಿ, ಚಾಗಂ, ಅಣ್ಮು ಎಂಬುದೇ ಅವು. ಸತ್ಯವನ್ನು ನುಡಿಯುವುದು. ನುಡಿದುದನ್ನೂ ಸ್ವಲ್ಪವೂ ತಪ್ಪದೆ ನಡೆಸುವುದು, ಆರ್ತರಾದವರಿಗೂ ಸತ್ಕಾರ್ಯಕ್ಕೂ ಯಾವಾಗಲೂ ತ್ಯಾಗಮಾಡುವುದೂ, ಎಂದೂ ಧೈರ್ಯಗೆಡದೆ ಪರಾಕ್ರಮ ಪ್ರದರ್ಶನ ಮಾಡುವುದೂ, ಕನ್ನಡಿಗನ ಅಭಿಮಾನ ಧನ. ಇದನ್ನೇ ಪಂಪರನ್ನಾದಿಗಳು ದುರ್ಯೋಧನನನ್ನು ಪ್ರಶಂಸಿಸುವ ಪದ್ಯಗಳಲ್ಲಿ ವಿಶದಪಡಿಸಿದ್ದಾರೆ.

ಇವುಗಳನ್ನೇ ಶಾಸನಗಳಲ್ಲಿ ಬರುವ ರಾಜರುಗಳ ಬಿರುದಗಳಾದ ಸತ್ಯ ವಾಕ್ಯ ಕೊಂಗಣಿವರ್ಮ, ನುಡಿದ ದಮೀರದು ನನ್ನಿಗಾರ, ಪದ ವಾಕ್ಯ ಪ್ರಮಾಣ, ಅರಿರಾಯ ವಿಮರ್ದಕ, ಇರಿವ ಬೆಡಂಗ, ದಾನಚಿಂತಾಮಣಿ, ದಾನವಿನೋದ —ಮೊದಲಾದುವು ಸ್ಪಷ್ಟಪಡಿಸುತ್ತವೆ.

ಕನ್ನಡಿಗರ ತ್ಯಾಗಗುಣವು ಅಸಂಖ್ಯಾತ ಶಾಸನಗಳಿಂದ ಪ್ರಕಟವಾಗಿದೆ. ಅವುಗಳೆಲ್ಲ ಧರ್ಮದ ಅಡಿಗಲ್ಲಿನ ಮೇಲೆಯೇ ನಿರ್ಮಿತವಾದುವು. ಅವುಗಳು ಬಹುಮುಖವಾಗಿವೆ. ರಾಜಾಧಿರಾಜರೇ ಅಲ್ಲದೆ ಸಾಮಂತರಾಜರು ರಾಜ್ಯಾಧಿಕಾರಿಗಳು, ಊರಗಾವುಂಡ, ವರ್ತಕರ ಗುಂಪು, ದೇವಾಲಯದ ನರ್ತಕಿ, ಧರ್ಮ ಶ್ರದ್ಧೆಯುಳ್ಳ ಸ್ತ್ರೀ ಪುರುಷರು—ವಿಧ ವಿಧವಾದ ದಾನಗಳನ್ನು ಕೊಟ್ಟಿದ್ದಾರೆ. ಶೈವ ವೈಷ್ಣವ ದೇವಾಲಯ, ಜೈನರ ಬಸದಿ, ಬೌದ್ಧರ ವಿಹಾರಗಳು, ಜಂಗಮರ ಮಠಗಳು ಮುಂತಾದವುಗಳ ಸ್ಥಾಪನೆ, ಜೀರ್ಣೋದ್ಧಾರ

ಡಾ॥ ಎನ್. ಅನಂತರಂಗಾಚಾರ್

ಸುತ್ತು ಗೋಡೆಗಳ ನಿರ್ಮಾಣ. ಅಂಗಭೋಗ, ರಂಗಭೋಗ, ಪೂಜಾಪುನಸ್ಕಾರಾದಿಗಳು ಪಾರಾಯಣಗಳು ಸಂಸ್ಥೆಗಳ ಆಶ್ರಯದಲ್ಲಿರುವ ವಿದ್ವಾಂಸರು, ವಿದ್ಯಾರ್ಥಿಗಳು, ಕೈಂಕರ್ಯ ಪರರು, ವಿದ್ಯಾಸಂಸ್ಥೆಗಳು, ಇವರುಗಳ ಪೋಷಣೆ, ಸಾರ್ವಜನಿಕರ ಅನ್ನದಾನ ವಿದ್ಯಾದಾನ–ಇವುಗಳಿಗೆ ಹೊಲವನ್ನೋ ಗದ್ದೆಯನ್ನೋ ಹೇರನ್ನೋ ಉದಾರವಾಗಿ ದಾನಮಾಡಿರುವ ಅನೇಕ ಶಾಸನಗಳು ಕರ್ನಾಟಕದಲ್ಲೆಲ್ಲಾ ಸಿಗುತ್ತವೆ. ವ್ಯಕ್ತಿಯ ಸ್ವಂತ ಇಹಪರಸಾಧನೆಗಾಗಿಯೂ, ರಾಜರ, ಇತರ ಬಂಧುಗಳ, ಇಲ್ಲಿಯ ಪ್ರಗತಿ ಮತ್ತೂ ಮುಂದಿನ ಸಾಧನೆಗಾಗಿಯೂ ದಾನಮಾಡಿರುವ ಪ್ರಸಂಗಗಳು ಅಲ್ಪವೇನಿಲ್ಲ. ಅನ್ನದಾನ, ವಿದ್ಯಾದಾನ, ವಾಪಿಕೂಪತಟಾಕಾದಿಗಳ ನಿರ್ಮಾಣ ಪರಮೋತ್ಕೃಷ್ಟವೆಂದು ಕರ್ನಾಟಕದಲ್ಲಿ ಭಾವಿಸಲ್ಪಟ್ಟಿತು.

ದುಷ್ಟಶಿಕ್ಷಣ ಮತ್ತು ಶಿಷ್ಟ ಸಂರಕ್ಷಣೆಗಾಗಿ ಪರಾಕ್ರಮ ಪ್ರದರ್ಶನಮಾಡುವುದೂ ಪ್ರಾಣತ್ಯಾಗಮಾಡುವುದೂ, ಅಂತಹ ಕಾರ್ಯವನ್ನೂ ಸಮಾಜವು ಗುರುತಿಸಿ ಶ್ಲಾಘಿಸಿ ನೊಂದವರಿಗೆ ಸಹಾಯಮಾಡಿ ಪ್ರದರ್ಶನಕಾರರ ಹಿರಿಮೆಯನ್ನು ಚಿರಸ್ಥಾಯಿಯನ್ನಾಗಿ ಮಾಡುವುದೂ ಕನ್ನಡ ಸಮಾಜದ ಒಂದು ಶ್ರೇಷ್ಠ ಲಕ್ಷಣ. ಕರ್ನಾಟಕದಲ್ಲೆಲ್ಲ ಸಹಸ್ರ ಸಂಖ್ಯೆಯಲ್ಲಿ ಹರಡಿರುವ ವೀರಗಲ್ಲುಗಳು ಇದನ್ನು ಉದ್ಘೋಷಿಸುತ್ತವೆ. ಇವು ಸತ್ತವರ ಸಾಹಸವನ್ನೇ ಅಲ್ಲದೆ ಉಳಿದವರ ಪರಾಕ್ರಮವನ್ನು ವಿಶದ ಪಡಿಸುತ್ತವೆ. ಇವು ಧರ್ಮಕ್ಕಾಗಿ ದೇಹವನ್ನು ಒಪ್ಪಿಸಿದವರ, ಸೆರೆಹಿಡಿದ ತುರುಗಳನ್ನು ಮರುಕೊಳಿಸಿದವರ, ಸಾಹಸದಲ್ಲಿ ಸತ್ತವರ, ಕಳ್ಳಕಾಕರನ್ನು ಓಡಿಸಿದವರ, ರಾಜರ ಪರವಾಗಿ ಶತ್ರುಗಳೊಡನೆ ಯುದ್ಧ ಮಾಡಿದವರ, ಸ್ವಾಮಿ ಭಕ್ತಿ ಪ್ರದರ್ಶನ ಮಾಡಿದವರ, ಸ್ತ್ರೀಯರ ಮಾನ ಸಂರಕ್ಷಣೆ ಮಾಡಿದವರ, ಜ್ಞಾಪಕಾರ್ಥವಾಗಿ ಹಾಕಿದ ಶಾಸನ ಕರ್ತವ್ಯವನ್ನು ವಿಶದ ಪಡಿಸುವುದು.

ಕೆರೆಯಂ ಕಟ್ಟಿಸು, ಬಾವಿಯಂ ಸವೆಸು ದೇವಾಗಾರಮಂ ಮಾಡಿಸಜ್ಜರೆಯೊಳ್ ಸಿಕ್ಕಿದನಾಥರಂ ಬಿಡಿಸು. ಮಿತ್ರರ್ಗಂಬುಕೆಯ್ ನಂಬಿದರ್ಗೆರೆವಟ್ಟಾಗಿರು ಶಿಷ್ಟರಂ ಪೊರೆಯೆನುತ್ತೆಲ್ಲಮಂ ಪಿಂದೆ ತಾಯಿರೆದಳ್ ಪಾಲೆರೆವಂದು –

ಇಂತಹ ಗುಣಭರಿತನಾದ ರಾಜನು ಸಮಾಜ ಜೀವನದಲ್ಲಿ ಎಂತಹ ಮಾರ್ಗದರ್ಶಿಯಾಗಬಲ್ಲನೆಂಬುದು ಸುವಿದಿತ.

ಕರ್ನಾಟಕದಲ್ಲಿ ಭಾರತದ ಇತರ ಭಾಗಗಳಂತೆಯೇ ಆದಿಕಾಲದಿಂದ ವರ್ಣಾಶ್ರಮಪದ್ಧತಿ ಬಹುಕಟ್ಟುನಿಟ್ಟಾಗಿ ಪರಿಪಾಲಿತವಾಗಿದೆ. ಈ ಪದ್ಧತಿಯನ್ನು ಪಾಲಿಸಿ ಕೊಂಡು ಬರುವುದೂ ರಾಜರ ಕರ್ತವ್ಯದ ಒಂದು ಭಾಗವಾಗಿತ್ತು. ಆದಿಕಾಲದಲ್ಲಿ ವರ್ಣಾಶ್ರಮದ ವ್ಯವಸ್ಥೆ ಬಹು ಬಿಗಿಯಾಗಿದ್ದು, ಮುಂದಿನ ಕಾಲಗಳಲ್ಲಿ ಅದು ಸಡಿಲಗೊಂಡದ್ದು ಕಂಡುಬರುತ್ತದೆ. ಸಮಾಜದಲ್ಲಿ ಬ್ರಾಹ್ಮಣರಿಗೆ ಉತ್ತಮಸ್ಥಾನ. ಅವರು ಬಹು ಗೌರವಾನ್ವಿತರಾಗಿರುತ್ತಿದ್ದರು. ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ ಪ್ರತಿಗ್ರಹವೆಂಬ ಷಟ್ಕರ್ಮಕ್ಕೂ ಅವರ ಅಧಿಕಾರಿಗಳಾಗಿರುತ್ತಿದ್ದರು. ಧರ್ಮನಿರ್ವಹಣ ಅವರ ಪ್ರಧಾನ ಕಾರ್ಯ, ಕದಂಬ ರಾಷ್ಟ್ರಕೂಟರ ಕಾಲದಲ್ಲಿ ಅವರು ಮಂತ್ರಿಗಳಾಗಿದ್ದದ್ದೂ ಉಂಟು. ಸಾಮಾನ್ಯವಾಗಿಲ್ಲದಿದ್ದರೂ ವ್ಯವಸಾಯ ಮತ್ತು ವಾಣಿಜ್ಯ ಅವರಿಗೆ ನಿಷೇಧಿತವಾಗಿರಲಿಲ್ಲ. ವಿದ್ಯಾಕೇಂದ್ರಗಳು ಬಹುಮಟ್ಟಿಗೆ ಅವರವೇ ಆಗಿದ್ದವು. ಹ್ಯುಯಂತ್ಸಾಂಗನು ಬ್ರಾಹ್ಮಣರು ಪರಿಶುದ್ಧ ಚಿತ್ತರೂ, ನಿಷ್ಕಾಮುಕರ್ಮಿಗಳೂ, ನಿಷ್ಪಕ್ಷ ತತ್ತ್ವಪಾಲಕರೂ, ಬ್ರಹ್ಮಚರ್ಯನಿಷ್ಠರೂ ಶುದ್ಧ ಧರ್ಮಾಭಿಮಾನಿಗಳೂ ಆಗಿದ್ದರೆಂದು ಹೇಳಿದ್ದಾನೆ. ಇತ್ಸಿಂಗನು ಅವರು ಅತ್ಯಂತ ಶ್ರೇಷ್ಠರೆಂದು ಉಲ್ಲೇಖಿಸಿದ್ದಾನೆ. ಶಾಸನಗಳಲ್ಲಿ ಬ್ರಾಹ್ಮಣರಿಗೆ ವಿಶೇಷದಾನಗಳನ್ನಿತ್ತಿರುವುದು ಉಕ್ತವಾಗಿದೆ. ಧ್ರುವಶರ್ಮನೆಂಬ ಬ್ರಾಹ್ಮಣನು ವೇದ ವೇದಾಂಗ ಪುರಾಣನ್ಯಾಯಮೀಮಾಂಸಾದಿ ನಾನಾ ಶಾಸ್ತ್ರಪರಿಣತನಾಗಿದ್ದನು. ಈತನು ಅನೇಕ ಯಜ್ಞಯಾಗಾದಿಗಳನ್ನು ಮಾಡಿದ್ದನು. ಪರಮೇಶ್ವರ ಸತ್ಯಕ್ರತುಯಾಜಿಯೆಂಬುವನು 'ಘಟ್ಯಸಾಸ' ನಾಗಿದ್ದ–ಅಂದರೆ ಘಟಿಕಾಧಿಪತಿಯಾಗಿದ್ದನು. ಜಯದ್ವಿತ್ಥನೆಂಬುವನು ತ್ರೈವಿದ್ಯೆಯಲ್ಲಿ ಪಾರಂಗತನಾಗಿ ನಾಲ್ಕುನೂರು ಬ್ರಾಹ್ಮಣರಿಗೆ ಆಚಾರ್ಯನಾಗಿದ್ದನು. ಅವರು ಅಗ್ನಿಷ್ಟೋಮ, ವಾಜಪೇಯ, ಪೌಂಡರೀಕ,ವೈಶ್ವದೇವ-ಮುಂತಾದ ಯಜ್ಞಗಳನ್ನು ಮಾಡುತ್ತಿದ್ದರು. ಹಾಗೆಯೇ ರಾಜರಿಂದ ಮಾಡಿಸುತ್ತಿದ್ದರು, ಅಲ್ಲದೆ ಬಲಿ, ಚರು ಕೃಚ್ಛ್ರ, ಅತಿಕೃಚ್ಛ್ರ, ಮೊದಲಾದ ದೇಹದಂಡನೆಯಿಂದ ಕೂಡಿದ ಯಜ್ಞಗಳನ್ನು ನಡೆಸುತ್ತಿದ್ದರು. ಇವುಗಳಿಗಾಗಿ ಅವರಿಗೆ ಅನೇಕ ದಾನಗಳು ಕೊಡಲ್ಪಟ್ಟಿವೆ. ಅಗ್ನಿಚರ್ಯ, ಅಶ್ವಮೇಧ ಮೊದಲಾದುವುಗಳನ್ನು ರಾಜರಿಂದ ಮಾಡಿಸುತ್ತಿದ್ದರು. ಪಂಚಗ್ರಾಮದಾನ ಬ್ರಾಹ್ಮಣರಿಗೆ ಕೊಡುತ್ತಿದ್ದ ದಾನ. ಅಗ್ರಹಾರದಾನ ಬ್ರಾಹ್ಮಣರಿಗೆ ಮೀಸಲಾಗಿರುವುದು. ಆದಿಕಾಲದಿಂದ ಎಲ್ಲ ರಾಜರುಗಳು ಇಂತಹ ಅನೇಕ ದಾನಗಳನ್ನು ಮಾಡಿದ್ದಾರೆ. ಬ್ರಾಹ್ಮಣರು ಮೇಲೆ ತಿಳಿಸಿದಂತೆ ಮಂತ್ರಿಗಳೇ ಆಗಿದ್ದುದಲ್ಲದೆ ಕೆಲವು ಸಲ ಸ್ವತಃ ರಾಜ್ಯಪಾಲನ ಮಾಡಿದ್ದಾರೆ. ಕದಂಬ ಮೂಲಪುರುಷ ಮಯೂರ ಶರ್ಮ ಬ್ರಾಹ್ಮಣ, ವ್ಯಾಸರಾಯರು ವಿಜಯನಗರದಲ್ಲಿ ರಾಜನಿಗೆ ಕುಹೂಯೋಗದ ಕಾಲದಲ್ಲಿ ರಾಜ್ಯನಿರ್ವಹಣೆ ಮಾಡಿದ್ದಾರೆ. ಅವರು ಎಲ್ಲ ಕಾಲದಲ್ಲಿಯೂ ಅನೇಕ ತೆರಿಗೆಗಳಿಂದಲೂ ಮರಣ ದಂಡನೆಯಿಂದಲೂ ನಿವೃತ್ತರಾಗಿದ್ದಾರೆ. ಬ್ರಾಹ್ಮಣರು ಲೋಕಕಲ್ಯಾಣಕ್ಕಾಗಿ ಅನವರತ ದುಡಿಯುತ್ತಿದ್ದ ಸಮಾಜದ ಅನಿವಾರ್ಯ ಭಾಗವೆಂಬ ಪ್ರತ್ಯಯ ಎಲ್ಲರಲ್ಲಿಯೂ ಇರುತ್ತಿತ್ತು. ಅವರು ಈ ಭಾವನೆಯನ್ನು ಸಾರ್ಥಕಪಡಿಸಿಕೊಳ್ಳದೇ ಇರುತ್ತಿರಲಿಲ್ಲ.

ಸಮಾಜದಲ್ಲಿ ಕ್ಷತ್ರಿಯರು ಮುಂದಿನ ಗೌರವಕ್ಕೆ ಪಾತ್ರರಾಗಿರುತ್ತಿದ್ದರು. ರಾಜ್ಯಪಾಲನೆ ಅವರ ಮೀಸಲಕರ್ಮವಾಗಿದ್ದರೂ ವ್ಯವಸಾಯ ವಾಣಿಜ್ಯಾದಿಗಳಲ್ಲಿ ಭಾಗಿಗಳಾಗಿದ್ದ ಸಂದರ್ಭಗಳೂ ಸೂಚಿತವಾಗಿವೆ. ಇವರು ಯೋಧವರ್ಗದವರು. ಸಾರ್ವಭೌಮತ್ವವನ್ನು ಆಳಿದವರು. ಆದಿಕಾಲದಲ್ಲಿ ಅನೇಕ ಯಜ್ಞಯಾಗಾದಿಗಳನ್ನು ಲೋಕಕಲ್ಯಾಣಕ್ಕಾಗಿಯೂ ಆತ್ಮೋನ್ನತಿಗಾಗಿಯೂ ನಡೆಸುತ್ತಿದ್ದರು. ಇಮ್ಮಡಿ ಪುಲಕೇಶಿಯು ಪ್ರಜಾ ಕಲ್ಯಾಣ ದೃಷ್ಟಿಯಿಂದ ರಾಜ್ಯಭಾರ ಮಾಡುತ್ತಿದ್ದನೆಂದು ಹ್ಯುಯಂತ್ಸಾಗನು ತಿಳಿಸಿದ್ದಾನೆ. ಕೃಷ್ಣದೇವರಾಯನ ರಾಜ್ಯಭಾರದ ವೈಭವವನ್ನು ಪರದೇಶೀಯ ಯಾತ್ರಿಕರು ಬಾಯಿತುಂಬ ಹೊಗಳಿದ್ದಾರೆ. ಬಹುಕಾಲದವರೆಗೆ ಇವರಿಗೆ ವೇದಾಧಿಕಾರವು ಇದ್ದುದು ಕಂಡು ಬರುತ್ತದೆ.

ಸಮಾಜದಲ್ಲಿ ಮುಂದಿನ ಸ್ಥಾನ ವೈಶ್ಯರದು. ಇವರು ವಾಣಿಜ್ಯಾದಿ ಕಾರ್ಯಗಳಲ್ಲಿ ನಿರತರಾಗಿದ್ದರು. ಆದ ಕಾರಣ ಇವರಿಗೂ ವೇದಾಧಿಕಾರವಿದ್ದರೂ ಅಲ್ಬರೋನಿಯ ಕಾಲಕ್ಕೆ ಅವರು ಅದನ್ನು ಕಳೆದುಕೊಂಡಿದ್ದರು. ಶೂದ್ರರು ಚತುರ್ಥವರ್ಣದವರು. ಇವರದು ದಾಸ್ಯ ವೃತ್ತಿಯಾಗಿರುತ್ತಿತ್ತು. ಅಸ್ಪೃಶ್ಯತೆ ಬಹಳ ಹಿಂದಿನ ಕಾಲದಿಂದಲೂ ಉಲ್ಲೇಖವಾಗಿದೆ. ಅವರು ಸೇವಾವೃತ್ತಿಗಳಲ್ಲದೇ ನಗರ ನೈರ್ಮಲ್ಯಾದಿಕಾರ್ಯಗಳಲ್ಲಿ ಭಾಗವಹಿಸುತ್ತಿದುದು ನಿರೂಪಿತವಾಗಿದೆ.

ಸಮಾಜವು ಸ್ಥೂಲವಾಗಿ ನಾಲ್ಕು ವರ್ಣಗಳಾಗಿ ವಿಭಾಗವಾಗಿದ್ದರೂ ಸ್ಮೃತಿಗ್ರಂಥಗಳೂ ಶಾಸನಗಳೂ ಜನಸಮುದಾಯವನ್ನು ಹದಿನೆಂಟು ಪ್ರಕೃತಿಗಳಾಗಿ ವಿಭಜಿಸುತ್ತವೆ. ಕ್ರಿ. ಶ. ೭ ನೆಯ ಶತಮಾನದ ಲಕ್ಷ್ಮೀಧರನ ಶಾಸನವು ಹದಿನೆಂಟು ಪ್ರಕೃತಿಗಳಿಗೆ ಅರಸನು ಮಹಾಜನರೊಂದಿಗೆ ಹಕ್ಕುಬಾಧ್ಯತೆಗಳನ್ನು ದಯಪಾಲಿಸಿರುವುದನ್ನು ಉಲ್ಲೇಖಿಸಿದೆ. ಈ ಹದಿನೆಂಟು ಪ್ರಕೃತಿಗಳನ್ನು ಜನತಾಸಮೂಹ ಅಥವಾ ಅಧಿಕಾರಿವರ್ಗ ಎಂಬ

(34 ನೇ ಪುಟ ನೋಡಿ)

# ತ್ಯಾಗರಾಜರು ಚಿತ್ರಿಸಿದ ಶ್ರೀರಾಮ

(ಹಿಂದಿನ ಸಂಚಿಕೆಯಿಂದ)

## ಮೃದುಭಾಷಿ :

ಶ್ರೀರಾಮನ ಮತ್ತೊಂದುಗುಣ ಅವನ ಮಾತು. ಅದು ಮೃದು, ಇಂಪು, ಕೇಳುವವರಿಗೆ ತಂಪು, ಇದೊಂದು ಅಪರೂಪವಾದ ಗುಣ. ಯಾರನ್ನಾಗಲೀ ತಾನೇ ಮೊದಲು ಅವರನ್ನು ಮಾತನಾಡಿಸುತ್ತಿದ್ದನೆಂದು ವಾಲ್ಮೀಕಿ ಪದೇ ಪದೇ ಹೇಳಿದ್ದಾರೆ. ಯಾವಾಗಲೂ ಸ್ಮಿತವದನನಾಗಿ ಪ್ರಿಯವಾಗಿ ಮಾತನಾಡುತ್ತಿದ್ದನು. (ಸ್ಮಿತಪೂರ್ವಾಭಿಭಾಷೀ ಪೂರ್ವಭಾಷೀ ಪ್ರಿಯಂವದಃ, ಸ್ಮಿತ ಪೂರ್ವಂ ಚ ಭಾಷತೇ, ಮೃದು ಪೂರ್ವಂ ಚ ಭಾಷತೇ, ಪ್ರಿಯವಾದೀ ಚ ಭೂತಾನಾಮ್–ರಾಮಾಯಣ) ಅವನೊಂದಿಗೆ ಕಠಿಣವಾಗಿ ಮಾತನಾಡಿದರೂ ಅವನು ಉತ್ತರಕೊಡುತ್ತಿರಲಿಲ್ಲ. (ಉಚ್ಯಮಾನೋಪಿ ಪರುಷಂ ನೋತ್ತರಂ ಪ್ರತಿಪದ್ಯತೇ – ರಾಮಾಯಣ) ಈ ಗುಣಗಳನ್ನು ತ್ಯಾಗರಾಜರು ಹಲವು ಕೃತಿಗಳಲ್ಲಿ ಹೇಳಿದ್ದಾರೆ. (ಮೃದುಭಾಷ–ಜಯ ಜಯಶ್ರೀ ರಘುರಾಮ–ಗೌಳೀ; ಮೆಲ್ಲನಿ ಮಾಟಲು–ಇಂತ ನುಚು ವರ್ಣಿಂಪ – ಗುಂಡಕ್ರಿಯಾ; ಮೆಲ್ಲನಿ ಮಾಟಲೋ–ಮರವಕುರಾ – ದೇವಗಾಂಧಾರಿ; ಮೃದು ಸುಭಾಷ–ಸಾಧಿಂಚಿನೇ–ಆರಭಿ ಮತ್ತು ರಾಮ ನೀ ಸಮಾನಮೆವರು – ಖರಹರಪ್ರಿಯ) "ನಿನ್ನ ರುಚಿಕರವಾದ ಮಾತುಗಳಿಂದ ಜನರ ಹೃದಯವನ್ನು ಅವರ ವ್ಯಕ್ತಿತ್ವಕ್ಕೆ ತಕ್ಕಂತೆ ಆಡಿಗೆಲ್ಲುವ ನಿನ್ನ ಶಕ್ತಿಯು ಆಶ್ಚರ್ಯಕರ" ಎಂದಿದ್ದಾರೆ ತ್ಯಾಗರಾಜರು. (ಏಮನಿ ಮಾಟಾಡಿತಿವೋ ರಾಮ–ತೋಡಿ) ರಾಮನ ಮಾತಿನ ರುಚಿಯನ್ನು ಉದ್ಗರಿಸುತ್ತಾ "ರಾಮನ ಮಾತಿನರುಚಿ ಕಲ್ಲುಸಕ್ಕರೆಯ ರುಚಿಯನ್ನೂ ಮೀರಿಸಿದೆ" ಎಂದಿದ್ದಾರೆ. (ಪಲುಕು ಕಂಡಚಕ್ಕೆರನು ಗೆರುನೇ ಪಡತುಲಾರ ಜೂಡರೇ) ಶ್ರೀರಾಮನು ಅಮೃತದ ಮಾಧುರ್ಯವಿರುವ ಮಾತುಗಳನ್ನಾಡುವವನು. (ಸುಧಾ ಮಾಧುರ್ಯ ಭಾಷಣ – ಸಿಂಧುರಾಮಕ್ರಿಯಾ) ಅವನು ಸುಧಾಮಯವಚೋಬೃಂದ (ಜಗದಾನಂದ–ನಾಟ); ಮಧುರಾಲಾಪ (ಭವಸನ್ನುತ–ವರಾಳಿ); ಸುಭಾಷಣ (ನಳಿನಲೋಚನ–ಮಧ್ಯಮಾವತಿ); ಮೃದುಭಾಷಣ (ಕರಪಾಲಯ ದಾಶರಥೇ – ಶಂಕರಾಭರಣ) ಮೃದುತರಭಾಷ (ಜೋಜೋ ರಾಮ–ರೀತಿಗೌಳ) ವರಮೃದುಭಾಷ (ಮರಿವೆನು, ನೀ ದಯಚೇ, ತವ ದಾಸೋಹಂ); ಸನ್ಮೃದುಭಾಷ (ಶ್ರೀ ರಘುವರ ಕರುಣಾಕರ) ಮತ್ತು ಲಲಿತ ಭಾಷ (ಕ್ಷೀರಸಾಗರವಿಹಾರ); ಸಲಲಿತವಚನ (ದೀನ ಜನಾವನ) ಅವನು ಪರದೂಷಣ ಜನಗಣಭೀಷಣ (ನಾರಾಯಣ ಹರಿ–ಯಮುನಾಕಲ್ಯಾಣಿ); ಶ್ರೀರಾಮನಿಗೆ ಆರತಿ ಎತ್ತುವಾಗ ತ್ಯಾಗರಾಜರು ಹೇಳಿರುವ ಮೊದಲನೆಯಗುಣ–ಅತಿಮೃದುತರಸತ್ಯ ಭಾಷಣ. ರಾಮನ ಮಾತು ಮಧುರವಾಗಿದ್ದುದಲ್ಲದೆ ಸಮಯೋಚಿತವಾಗಿರುತ್ತಿತ್ತು. (ಯುಕ್ತವಚನ–ಮಾಮವ ಸತತಂ–ಜಗನ್ಮೋಹಿನಿ) ಶ್ರೀರಾಮನ ಮಾತುಗಳನ್ನು ಕೇಳುವ ಮತ್ತು ಅವನೊಡನೆ ಸಂಭಾಷಿಸುವ ಹಂಬಲವನ್ನು ತ್ಯಾಗರಾಜರು ತಮ್ಮ ಹಲವು ಕೃತಿಗಳಲ್ಲಿ ವ್ಯಕ್ತಗೊಳಿಸಿದ್ದಾರೆ. (ಪಲುಕವೇಮಿ ನಾ ದೈವಮಾ–ಪೂರ್ಣಚಂದ್ರಿಕಾ) ಶ್ರೀರಾಮನ ಮಾತು ಮಧುರ,ವಿನಂತಿ ಸಿಹಿ ಮತ್ತು ಅದ್ವಿತೀಯ. ತೋಡಿರಾಗದ 'ಏಮನಿ ಮಾಟ್ಲಾಡಿತಿವೋ' ಎಂಬ ಕೃತಿಯಲ್ಲಿ ತ್ಯಾಗರಾಜರು ಹೀಗೆ ಪ್ರಶ್ನಿಸಿದ್ದಾರೆ "ನಿನ್ನ ದರ್ಶನವನ್ನು ಪಡೆಯಲು ಬಂದ ನಾನಾ ಜನರೊಂದಿಗೆ ನೀನು ಹೇಗೆ ಸಂಭಾಷಿಸಿದೆ? ನಿನ್ನನ್ನು ಭೇಟಿಮಾಡಿದವರೆಲ್ಲರೂ ತಮಗೆ ಒಳ್ಳೆಯದಾಗಿದೆ ಎಂದು ಭಾವಿಸಿದರು. ನಿನ್ನ ದರ್ಶನ ಮಾಡಲು ಬಂದವರು ಮೊದಲು ಸಂಕೋಚ ಹಾಗೂ ಭಯದಿಂದ ತೊದಲಿ, ನಿನ್ನ ಹಿತಕರವಾದ ಮಾತುಗಳಿಂದ ಧೈರ್ಯಹೊಂದಿ ತಮ್ಮ ಮನಸ್ಸಿನಲ್ಲಿ ಇದ್ದುದನ್ನು ಸ್ವಲ್ಪ ಹೊತ್ತಾದನಂತರ ಹೇಳಲು ಸಾಧ್ಯವಾಯಿತು. ಇದು ಸ್ವಾಭಾವಿಕ, ನೀನು ಆದರ್ಶ ಪುರುಷೋತ್ತಮ, ಮಾನವನ ಮನಸ್ಸನ್ನು ತಿಳಿದ ನೀನು, ನಿನ್ನನ್ನು ನೋಡಲು ಬಂದವರ ಮನಸ್ಸನ್ನು ಪೂರ್ವಭಾವಿಯಾಗಿ ತಿಳಿದು ಮೃದುಮಧುರವಾದ ಮಾತುಗಳಿಂದ ಉತ್ತರಿಸಿದೆ."



## ಸೌಲಭ್ಯ :

ಶ್ರೀರಾಮನ ಮತ್ತೊಂದು ಗುಣವೆಂದರೆ ಸೌಲಭ್ಯ. ಈ ಗುಣವನ್ನು ಕುರಿತು ರಾಮಾಯಣದಲ್ಲಿ ಅನೇಕ ಕಡೆ ಹೇಳಿದೆ. ತನ್ನ ಕಾರ್ಯವನ್ನು ಮುಗಿಸಿಕೊಂಡು ತನ್ನ ನಿವಾಸಕ್ಕೆ ಹಿಂತಿರುಗಿದ ಕೂಡಲೇ ಪ್ರತಿ ಒಬ್ಬ ಪ್ರಜೆಯ ಕ್ಷೇಮವನ್ನು ತನ್ನ ಸಮೀಪದ ಬಂಧುಗಳನ್ನು ವಿಚಾರಿಸುವಂತೆ ವಿಚಾರಿಸುತ್ತಿದ್ದನು. (ಕುಚಿ ವರ್ಷ್ಯಃ ಸಮಾಧಿಮಾನ್| ಪೌರಾನ್ ಸ್ವಜನವನ್ನಿತ್ಯಂ ಕುಶಲಂ ಪರಿಪೃಚ್ಛತಿ–ರಾಮಾಯಣ). ಗುಹ, ಶಬರಿ, ವಾನರರು–ಇವರ ಬಗ್ಗೆ ಅವನು ನಡೆದು ಕೊಳ್ಳುತ್ತಿದ್ದುದು ಅವನ ಸೌಲಭ್ಯಕ್ಕೆ ನಿದರ್ಶನ. ವಾನರರು ಅವನಿಗೆ ಸ್ವಂತ ಜನರಾಗಿದ್ದರು. (ಜನೋಯಂ ಸ್ವಜನೋ ಮಮ) ಈ ಸೌಲಭ್ಯವು ಅವನಿಗೆ ಸ್ವಾಭಾವಿಕವಾಗಿತ್ತು. ಎಲ್ಲರನ್ನೂ ಸಮನಾಗಿ ಕಾಣುತ್ತಿದ್ದನು. (ಆರ್ಯಃ ಸರ್ವಸಮಶ್ಚೈವ –ವಾಲ್ಮೀಕಿ) ಇದನ್ನೇ ತ್ಯಾಗರಾಜರು 'ಸರ್ವಸಮುಡು' ಎಂದಿರುವುದು (ಉಂಡೇದಿ–ಹರಿಕಾಂಭೋಜಿ).

## ಧರ್ಮಾತ್ಮ :

ಮತ್ತೊಂದು ಮೂಲಭೂತವಾದ ಗುಣವೆಂದರೆ ಅವನು ಧರ್ಮಾತ್ಮ. ಅಧರ್ಮವು ಹೆಚ್ಚಿದಾಗಲೆಲ್ಲಾ ಧರ್ಮ ಸಂಸ್ಥಾಪನೆ ಮಾಡುವುದು ಭಗವಂತನ ಅವತಾರವಾದ ಮುಖ್ಯಗುರಿ. ಧರ್ಮದ ಹಿರಿಮೆಯನ್ನು ಎತ್ತಿ ಹಿಡಿಯಲು ಶ್ರೀರಾಮನು ಅವತರಿಸಿದನು. "ಧರ್ಮಾತ್ಮಾ ರಾಮೋ ಧರ್ಮಭೃತಾಂ ವರಃ, ಸಾಕ್ಷಾದ್ರಾಮಾದ್ವಿನಿವೃತ್ತೋ, ಧರ್ಮಃ, ಧರ್ಮ ಸ್ಸರ್ವಾತ್ಮನಾ ಶ್ರಿತಃ, ಏವ ವಿಗ್ರಹವಾನ್ ಧರ್ಮಃ||" (ರಾಮಾಯಣ) ಇತ್ಯಾದಿಯಾಗಿ ವಾಲ್ಮೀಕಿ ಮಹರ್ಷಿಯು ರಾಮನ ಮುಖ್ಯಗುಣವನ್ನು ಹೇಳಿದ್ದಾರೆ, "ರಾಮನೊಬ್ಬನಿರುವುದರಿಂದ ನಾವು ನಾಶವಾಗುವೆವು ಎಂಬ ಭಯವಿಲ್ಲ. ಅವನು ಧರ್ಮಾತ್ಮಾ" ಎಂದಿದ್ದಾರೆ ತ್ಯಾಗರಾಜರು. (ಉಂಡೇದಿ–ಹರಿಕಾಂಭೋಜಿ) ಇತರ ಹಲವಾರು ಕೃತಿಗಳಲ್ಲೂ ಶ್ರೀರಾಮನ ಈ ಗುಣವನ್ನು ಹೇಳಿದ್ದಾರೆ. 'ದಲಿತ ದುರ್ಮಾನವ ದುರ್ಜನದೂರ;

ಡಾ|| ವಿ.ಎಸ್.
ಸಂಪತ್ಕುಮಾರಾಚಾರ್ಯ

ದುಷ್ಟಜನ ದೂರ, ಕ್ರೂರಜನ ವಿದೂರ, ಕುವನೋಜನಗಣಭೀಮ” ಇತ್ಯಾದಿ ಗುಣವಾಚಕಗಳಿಂದ ಶ್ರೀರಾಮನ ಈ ಗುಣವನ್ನು ಒತ್ತಿ ಹೇಳಿದ್ದಾರೆ.

## ಸತ್ಯಸಂಧ :

ಶ್ರೀರಾಮನು ಕೇವಲ ಧರ್ಮಾತ್ಮನು ಮಾತ್ರವಲ್ಲ, ಅವನು ಸತ್ಯಸಂಧ. ಪಂಪಾಲಯ ಮಾಂ (ದರ್ಬಾರ್) ಎಂಬ ಕೃತಿಯಲ್ಲಿ ತ್ಯಾಗರಾಜರು ವಾಲ್ಮೀಕಿಯ ‘ಸತ್ಯಸಂಧ’ ಎಂಬ ಪದವನ್ನು ಬಳಸಿರುವುದಲ್ಲದೆ ಅವನು ಸಕಲ ಸತ್ಯಜನರನ್ನು ಕಾಪಾಡುವವನು ಎಂದಿದ್ದಾರೆ (ಸತ್ಯಜನಾವನ). ಅವನು ‘ವಚನ ಸತ್ಯ’ನೂ ಸಹ (ಎಂದರೋ–ಶ್ರೀರಾಗ). ರಾಮನು ಎರಡು ಮಾತುಗಳನ್ನಾಡುತ್ತಿರಲಿಲ್ಲ (ರೆಂಡು ಮಾಟಲಾಡೇ ವಾಡು ಗಾದನಿ-ಏಟಿ ಯೋಚನಲು ಕಿರಣಾವಣಿ; ರಾಮೋ ದ್ವಿರ್ನಾಭಿಭಾಷತೇ!) ತನ್ನ ತಂದೆಯ ಮಾತನ್ನು ಉಳಿಸಲು ಕಾಡಿಗೆ ಹೋದನು. (ಆಡಿನ ಮಾಟಲು ದಪ್ಪಡನುಚುನು ಆಚಂದ್ರಾರ್ಕಮು ಗೀರ್ತಿಗಲಿಗಿನ ವಾಡೇರಾ ದೈವಮು ಮನಸಾ–ಪಂತುವರಾಳಿ). ಆಡಿದ ಮಾತಿಗೆ ಎಂದಿಗೂ ತಪ್ಪದೆ ಆಚಂದ್ರಾರ್ಕವಾದ ಕೀರ್ತಿಯನ್ನು ಪಡೆದಿರುವ ಶ್ರೀರಾಮನೇ ಭಗವಂತನು ಎಂದಿದ್ದಾರೆ ತ್ಯಾಗರಾಜರು. ರಾಮನ ಅಧಿಕಾರಕ್ಕೆ ಸತ್ಯವೇ ಆಧಾರ. ಅದನ್ನು ಯಾರಿಗೂ ಮೀರಲು ಸಾಧ್ಯವಿರಲಿಲ್ಲ: (ಸತ್ಯಮೈನ ಯಜ್ಞಮೀರ ಸಾಮರ್ಥ್ಯಮು ಗಲದಾ, ನಿತ್ಯರೂಪ–ಕಾಪಿ).

## ಏಕಪತ್ನೀವ್ರತಸ್ಥ :

ಏಕಪತ್ನೀ ವ್ರತಸ್ಥನಾಗಿದ್ದುದು ಶ್ರೀರಾಮನ ಒಂದು ಮುಖ್ಯಧರ್ಮ. ಇದನ್ನು ಸ್ಥಾಪಿಸಲು ಅವನು ಅವತರಿಸಿದನು. ಭರತನು ರಾಮನನ್ನು ಕಾಣದೆ ತನ್ನ ತಾಯಿ ಕೈಕೇಯಿಯನ್ನು ‘ರಾಮನನ್ನು ಕಾಡಿಗೆ ಕಳುಹಿಸಲು ಕಾರಣವೇನು; ಅವನೇನಾದರೂ ಯಾರಾದರೂ ಸ್ತ್ರೀಯ ಮಾನ ಭಂಗ ಮಾಡಿದನೇ’ ಎಂದು ಕೇಳಿದಾಗ, ಕೈಕೇಯಿ ಹೇಳುತ್ತಾಳೆ “ಇತರರ ಸ್ತ್ರೀಯರನ್ನು ಶ್ರೀರಾಮನು ಕಣ್ಣುಗಳಿಂದಲೂ ಸಹ ನೋಡುವುದಿಲ್ಲ” (ರಾಮಸ್ತು ಪರದಾರಾನ್ವೈ ಚಕ್ಷುರ್ಭ್ಯಾಮಪಿ ನೇಕ್ಷತೇ – ರಾಮಾಯಣ) ಈ ಗುಣಕ್ಕಾಗಿ ಶ್ರೀರಾಮನನ್ನು ಮರೆಯಲು ಸಾಧ್ಯವೇ ಇಲ್ಲ. “ನಿನ್ನ ಮುಖಾರವಿಂದದಿಂದ ಆಕರ್ಷಿತರಾಗಿ ನಿನ್ನ ಬಳಿಗೆ ಬಂದ ಪರಭಾಮೆಯರನ್ನು ನೀನು ನಿನ್ನ ಪುತ್ರಿಯರಂತೆ ಕಂಡೆ”ಎಂದಿದ್ದಾರೆ ತ್ಯಾಗರಾಜರು. ಅವನು ‘ಪರನಾರೀಸೋದರ; ಮತ್ತು ‘ಪರಭಾಮಿನೀದೂರ’ (ಸಾಧಿಂಚೆನೇ–ಆರಭಿ; ರಘುಪತೀ ರಾಮ–ಶಹಾನ) ಶ್ರೀರಾಮನಿಗೆ ಸೀತೆಯಲ್ಲಿ ಅಪಾರ ಪ್ರೇಮವಿತ್ತೆಂಬ ವಿಷಯವನ್ನು ಏಕ ಪತ್ನೀ ವ್ರತುಡೆ ಮನಸಾ, ಒಕ ಚಿತ್ತಮುಗಲವಾಡೇ” (ಒಕ ಮಾಟ–ಹರಿಕಾಂಭೋಜಿ ಎಂದು ಒತ್ತಿ ಹೇಳಿದ್ದಾರೆ.

## ಶಿಷ್ಟಾಚಾರಪಾಲಕ :

ಹಿರಿಯರಲ್ಲಿ ಗೌರವ ಮತ್ತು ಆಸ್ಥಾನದ ಶಿಷ್ಟಾಚಾರವನ್ನು ಪಾಲಿಸುವುದು ಶ್ರೀರಾಮನ ಮತ್ತೊಂದು ಪ್ರಮುಖಗುಣ, ಶಾಂತಮಾನಸನಾದ ಶ್ರೀರಾಮನು ಕಾಡಿಗೆ ಹೋಗಬೇಕೆಂಬುದನ್ನು ಕೇಳಿದಾಗ ಎರಡನೆಯ ಮಾತಾಡದೆ ಪಿತೃವಾಕ್ಯ ಪರಿಪಾಲನೆ ಮಾಡಿದನು. ವನವಾಸದಿಂದ ಹಿಂತಿರುಗಿದ ಕೂಡಲೇ ಅವನು ಮಾಡಿದ ಮೊದಲ ಕೆಲಸವೇನೆಂದರೆ ಕೈಕೇಯಿಗೆ ಸಾಷ್ಟಾಂಗ ಪ್ರಣಾಮ ಮಾಡಿ, ತನಗೆ ರಾವಣಾರಿ ಕೀರ್ತಿ ಲಭಿಸಲು ಅವಳೇ ಕಾರಣವೆಂದು ಹೇಳಿದ್ದು. ಇನ್ನಾವ ವ್ಯಕ್ತಿಯಾಗಿದ್ದರೂ ಈ ರೀತಿ ನಡೆದು ಕೊಳ್ಳುತ್ತಿರಲಿಲ್ಲವೆನ್ನಬಹುದು. ಲವಕುಶರು ರಾಮಾಯಣವನ್ನು ಆದಿವಾಗ್ಗೇಯಕಾರರಾದ ವಾಲ್ಮೀಕಿಮಹರ್ಷಿಯ ಸಂಗೀತದೊಂದಿಗೆ ಸೊಗಸಾಗಿ ಶ್ರೀರಾಮನ ಆಸ್ಥಾನದಲ್ಲಿ ಇಪ್ಪತ್ತೊಂದು ದಿನಗಳ ಕಾಲಹಾಡಿದರು. ರಾಮನು ಈ ಕಾವ್ಯ ಗಾನದಿಂದ ಮೋಹಿತನಾಗಿ ಆ ಬಾಲಕರ ಸಮೀಪಕ್ಕೆ ಹೋಗಿ ಕುಳಿತುಕೊಳ್ಳಬೇಕೆಂದು ಆಶಿಸಿದನು. ಒಂದೇ ಮನಸ್ಸಿನಿಂದ ಕೇಳುತ್ತಿದ್ದ ಇತರರಿಗೆ ತೊಂದರೆಯಾಗದಂತೆ, ಇತರರ ಗಮನವನ್ನು ಸೆಳೆಯದಂತೆ, ಮೆಲ್ಲನೆ ಸಿಂಹಾಸನದಿಂದೆದ್ದು ಬಂದು ಬಾಲಕರ ಮುಂದೆ ಕುಳಿತು ಕೇಳಲಾರಂಭಿಸಿದನು. ಸಂಗೀತಮಯವಾದ ಆ ವಾಚನವು ಮುಗಿದನಂತರ ರಾಮನು ಬಾಲಕರ ಸಮೀಪದಲ್ಲಿ ಕುಳಿತಿರುವುದನ್ನು ಅಲ್ಲಿ ನೆರೆದಿದ್ದ ಸಭಿಕರು ಗಮನಿಸಿ ಆಶ್ಚರ್ಯಪಟ್ಟರು.

## ಸಂಗೀತರಸಿಕ :

ವಾಲ್ಮೀಕಿ ಮಹರ್ಷಿಯು ರಾಮಾಯಣದಲ್ಲಿ ಹಲವು ಕಡೆ ಶ್ರೀರಾಮನು ಚಕ್ರವರ್ತಿಯಾಗಿ ಪಟ್ಟಾಭಿಷಿಕ್ತನಾಗಲು ಹೊಂದಿದ್ದ ಅನೇಕ ಗುಣಗಳಲ್ಲಿ ಅವನಿಗಿದ್ದ ವಿಶೇಷ ಸಂಗೀತಜ್ಞಾನವೂ ಒಂದು ಎಂದು ಹೇಳಿದ್ದಾರೆ. ತ್ಯಾಗರಾಜರು ಶ್ರೀರಾಮನನ್ನು ‘ರಾಗರಸಿಕ’ (ನಿನು ವಿನಾ ಸುಖಮು–ತೋಡಿ), ‘ಸಂಗೀತ ಪ್ರಿಯ’ (ರಕ್ಷ ಬೆಟ್ಟರೇ–ಭೈರವಿ) ಗಾನಲೋಲ (ವಾಚಾಮಗೋಚರಮೋ–ಕೈಕವಶೀ (ಜಾನಕೀರಮಣ – ಶುದ್ಧಸೀಮಂತಿನೀ), ‘ಸಂಗೀತಲೋಲ’ (ಶ್ರೀರಘುವರಾಪ್ರಮೇಯ–ಕಾಂಭೋಜಿ) ಎಂದು ಹೇಳಿರುವುದಲ್ಲದೆ ಅವನನ್ನು ‘ರಸಿಕ ಶಿರೋಮಣಿ’ ಎಂದಿದ್ದಾರೆ. (ದಾಶರಥೀ ನೀ ಋಣಮು–ತೋಡಿ). ಹೀಗೆ ಶ್ರೀರಾಮನನ್ನು ಕುರಿತು ಹೇಳಿರುವ ವಾಗ್ಗೇಯಕಾರ ಕವಿಗಳಲ್ಲಿ ತ್ಯಾಗರಾಜರೇ ಮೊದಲಿಗರು.

## ಪರಮಕಾರುಣಿಕ :

ಗುರುಭಕ್ತಿ, ನಿಜಭಕ್ತಪಾಲನೆ, ಅಪಾರಕರುಣೆ ಶ್ರೀರಾಮನ ಇತರ ಕಲ್ಯಾಣಗುಣಗಳು. ಇದಕ್ಕೆ ನಿದರ್ಶನ ಶಬರಿಗೆ ಮೋಕ್ಷವಿತ್ತುದು. ಗುರು ವಿಶ್ವಾಮಿತ್ರರು ಹೇಳಿದ ನಂತರವೇ ಜನಕನ ಆಸ್ಥಾನದಲ್ಲಿ ಶ್ರೀರಾಮನು ಶಿವಧನುಸ್ಸನ್ನು ಕೈಗೆ ತೆಗೆದುಕೊಂಡನು. ಅವನ ಅಪಾರ ಕರುಣೆಯನ್ನು ಕುರಿತು ತ್ಯಾಗರಾಜರು ಕರುಣಾಜಲಧಿಂ (ಕೇದಾರಗೌಳ) ಮತ್ತು ಕರುಣಾಸಮುದ್ರ (ದೇವಗಾಂಧಾರಿ) ಕೃತಿಗಳಲ್ಲಿ ಹಾಡಿದ್ದಾರೆ. ಅವನು ‘ಸುಗುಣನಿಧಿ’ (ಕರುಣಾಜಲಧೇ–ನಾದನಾಮಕ್ರಿಯ); ಸದ್ಗುಣಗಣ ಸಾಂದ್ರ (ಪಾಹಿ ರಾಮಚಂದ್ರ – ಶಂಕರಾಭರಣ); ಮತ್ತು ‘ಸುಗುಣಭೂಷಣ’ (ಸುಜನಜೀವನ–ಖಮಾಚ್)

ಶ್ರೀರಾಮನ ಗುಣಗಳೆಲ್ಲವೂ ಶ್ರೀರಾಮಾನುಜಾಚಾರ್ಯರಿಂದ ಈ ರೀತಿ ಹೇಳಲ್ಪಟ್ಟಿದೆ– “ಸ್ವಾಭಾವಿಕಾನವಧಿಕಾತಿಶಯಜ್ಞಾನ ಬಲೈಶ್ವರ್ಯ ವೀರ್ಯಶಕ್ತಿ ತೇಜಃ ಸೌಶೀಲ್ಯವಾತ್ಸಲ್ಯ ಮಾರ್ದವಾರ್ಜವ ಸೌಹಾರ್ದಸಾಮ್ಯ ಕಾರುಣ್ಯ ಮಾಧುರ್ಯ ಗಾಂಭೀರ್ಯೌದಾರ್ಯ ಚಾತುರ್ಯ ಸ್ಥೈರ್ಯ ಧೈರ್ಯ ಶೌರ್ಯ ಪರಾಕ್ರಮ ಸತ್ಯಕಾಮ ಸತ್ಯಸಂಕಲ್ಪ ಕೃತಿತ್ವ ಕೃತಜ್ಞತಾದ್ಯಸಂಖ್ಯೇಯ ಕಲ್ಯಾಣ ಗುಣ ಗಣೌಘ ಮಹಾರ್ಣವ!” (ಶರಣಾಗತಿ ಗದ್ಯ) ಆಚಾರ್ಯರು ಹೇಳಿರುವ ಭಗವಂತನ ಗುಣಗಳೆಲ್ಲವನ್ನೂ ಶ್ರೀರಾಮನಲ್ಲಿ ಕಂಡ ತ್ಯಾಗರಾಜರು ಅವುಗಳನ್ನು ವಿವಿಧ ಕೃತಿಗಳಲ್ಲಿ ಹೇಳಿದ್ದಾರೆ. ಒಂದೇ ಮಾತು, ಒಂದೇ ಬಾಣ,ಏಕಪತ್ನೀ ವ್ರತ–ಇವು ಶ್ರೀರಾಮನ ವ್ಯಕ್ತಿತ್ವದಸಾರ. ಈ ಗುಣಗಳಿಂದಲೇ ಶ್ರೀರಾಮನು ತ್ಯಾಗರಾಜರಿಗೂ, ಇಡೀ ದೇಶಕ್ಕೂ ಜೀವಾಧಾರವಾಗಿದ್ದಾನೆ.

*

# ವಿಯೋಗ ವಿಭಾವರಿ

ಮೂಲ: ಶ್ರೀ ನಾಯನಿ ಕೃಷ್ಣಮೂರ್ತಿ
ಅನುವಾದ: ಶ್ರೀಮತಿ ಬಿ. ರುಕ್ಮಿಣಿ

(ಹಿಂದಿನ ಸಂಚಿಕೆಯಿಂದ)

ಕೈಕೇಯಿ. ಅದು ಹೇಗೆ ?

ಮಂ: ಭರತನಿಗೆ ಪಟ್ಟಾಭಿಷೇಕ ಮಾಡುವುದು ಒಂದು ವರ ...... ರಾಮನಿಗೆ ಹದಿನಾಲ್ಕು ವರುಷ ವನವಾಸ ವಿಧಿಸುವುದು ಎರಡನೇ ವರ.

ಕೈ: ಮಂಥರೆ... ಕುಬ್ಜೆ, ಆದರೂ ನಿನ್ನಲ್ಲಿ ಎಂಥಾ ಪ್ರಜ್ಞೆ ಅಡಗಿದೆ. ನೀನು ಇಷ್ಟು ಜಾಣೆ ಅಂತ ತಿಳಿದಿರಲಿಲ್ಲ ನೋಡು. ಹಟ ತೊಟ್ಟು ಭರತನಿಗೆ ಪಟ್ಟಾಭಿಷೇಕ ಮಾಡಿಸುತ್ತೇನೆ. ಆದರೆ ಮಂಥರೆ; ರಾಮನನ್ನು ವನವಾಸಕ್ಕೆ ಕಳಿಸಿಕೊಡು ಅಂತ ಕೇಳಲಿಕ್ಕೆ ನನಗೆ ಬಾಯಿಬರುತ್ತಾ ಇಲ್ಲ. ಇದಕ್ಕೆ ನನ್ನ ಮನ ಅಂಗೀಕರಿಸುತ್ತಾ ಇಲ್ಲ. ಆ ರಾಮನು ನನ್ನನ್ನು ಹೆತ್ತ ತಾಯಿಗಿಂತ ಹೆಚ್ಚಾಗಿ ಪ್ರೀತಿಸುತ್ತಾನೆ. ಅವನನ್ನು ನೋಡದ ದಿನ ದುರ್ದಿನ ಅಂತ ಭಾವಿಸುವೆ, ಯಾವ ಪಾಪವನ್ನೂ ಅರಿಯದ ಆ ರಾಮನನ್ನು ವನವಾಸಕ್ಕೆ ಕಳಿಸೆಂದು ಹೇಗೆ ಹೇಳಲಿ?

ಮಂ: ಕೈಕೇಯಿ, ರಾಮನು ಸಾಮಾನ್ಯನೆಂದು ತಿಳಿದೆಯಾ? ಅವನು ರಾಜನೀತಿ ತಿಳಿದಂಥ ಮಹಾಮೇಧಾವಿ, ಜನರಿಗೆಲ್ಲಾ ರಾಮನ ಮೇಲೆ ಹೇಳಲಾಗದಷ್ಟು ಅಭಿಮಾನ. ರಾಮನು ರಾಜ್ಯದಲ್ಲಿದ್ದಷ್ಟು ದಿನ ಜನರ ಮನದಲ್ಲಿ ಅವನೇ ಸ್ಥಿರವಾಗಿ ಕೂತಿರುತ್ತಾನೆ. ಇದರಿಂದ ರಾಜನಾದ ಭರತನಿಗೆ ತುಂಬಾ ತೊಂದರೆಯಾಗುತ್ತದೆ. ಬಗಲಲ್ಲಿ ಯಾವಾಗಲೂ ದೊಣ್ಣೆ ಇರಬಾರದು. ರಾಮನು ಕಾಡುಪಾಲಾದರೆ ಸ್ವಲ್ಪ ದಿನ ಕಳೆದನಂತರ ಜನರು ಅವನನ್ನು ಮರೆತುಬಿಡುತ್ತಾರೆ. ಹದಿನಾಲ್ಕು ವರುಷ ಅಂತ ಅಂದಿದ್ದು ಅದಕ್ಕೆ? ಜನರ ಮನಸ್ಸನ್ನು ಸೆಳೆಯಲು ಭರತನಿಗೆ ಇಷ್ಟು ಕಾಲಾವಕಾಶವಾದರೂ ಬೇಕು. ಎಲ್ಲೈ ಕೈಕೇಯಿ, ಈ ಎರಡು ವರಗಳನ್ನು ಕೈಗೂಡಿಸಿಕೊ, ಆ ಮೇಲೆ ನಿಶ್ಚಿಂತೆಯಿಂದ ಇರಬಹುದು.

(ರಂಗಸ್ಥಲಕ್ಕೆ ಪ್ರವೇಶ ಮಾಡಿದಾಗ ಎಸೆದು ಬಿಸಾಡಿದ ನಾರುಮಡಿ ಬಟ್ಟೆ ಗಂಟನ್ನು ಕೈಗೆತ್ತಿಕೊಂಡು) ಇಲ್ಲಿ ನೋಡು; ಇದರಲ್ಲಿ ನಾರುಮಡಿ ಬಟ್ಟೆಗಳಿವೆ. ಇವುಗಳನ್ನು ಉಟ್ಟುಕೊಂಡು ಹೋಗೆಂದು ರಾಮನಿಗೆ ಹೇಳು.

(ಕೈಕೇಯಿ ಒಂದು ನಿರ್ಧಾರ ಮಾಡಿದವಳಂತೆ ಹಂಸತೂಲಿಕಾ ತಲ್ಪದಲ್ಲಿ ಕುಳಿತುಕೊಳ್ಳುತ್ತಾಳೆ. ಮಂಥರೆ ದೇದೀಪ್ಯಮಾನವಾಗಿ ಬೆಳಗುತ್ತಿದ್ದ ಕೆಲವು ದೀಪಗಳನ್ನು ಆರಿಸಿಬಿಡುತ್ತಾಳೆ.)

ದಾಸಿ: (ಹೊರಗಡೆಯಿಂದ ವೇಗವಾಗಿ ಒಳಗೆ ಪ್ರವೇಶಿಸುತ್ತಾಳೆ.) ಮಹಾರಾಣಿಯವರಿಗೆ ಶುಭವಾಗಲಿ. ಮಹಾ ಪ್ರಭುಗಳು ತಮ್ಮ ಮಂದಿರದ ಕಡೆಗೆ ಪ್ರವೇಶ ಮಾಡುತ್ತಿದ್ದಾರೆ. (ಹೇಳಿ ಹೋಗಿಬಿಡುವಳು.)

ಮಂ: ಕೈಕೇಯಿ, ಶುಭ ಸಮಯ ತನ್ನಷ್ಟಕ್ಕೆ ತಾನೇ ತಳ್ಳಿಕೊಂಡು ಬರುತ್ತಲಿದೆ: ಬರುತ್ತಾ ಇರುವವ ನಿನ್ನ ನಾಥನು. ಈಗ ನೀನಿರುವುದು ಕೋಪಗೃಹವೆಂದೇ ಎನಿಸುತ್ತದೆ. ಹೇಗೆ ಅಭಿನಯ ಮಾಡಿ ನಿನ್ನ ನಾಥನನ್ನು ನಿನ್ನೆಡೆಗೆ ಒಲಿಸಿಕೊಳ್ಳುತ್ತಿಯೋ ಏನೋ! ನಾನು ಹೋಗ್ತಾ ಇದ್ದೀನಿ: (ಹೋಗುವಳು)

(ಆಕ್ರೋಶ, ಆವೇಶ ತುಂಬಿದ ಕೈಕೇಯಿ ಮಂಚದಮೇಲಿಂದ ದಿಗ್ಗನೆ ಎದ್ದು ಕೊರಳಲ್ಲಿರೋ ಹಾರವನ್ನು ಕಿತ್ತು ಚೆಲ್ಲಾಪಿಲ್ಲಿಯಾಗಿ ಬಿಸಾಡುತ್ತಾಳೆ. ತಲೆಯಲ್ಲಿರುವ ಹೂವನ್ನು ಕಿತ್ತೆಸೆಯುತ್ತಾಳೆ. ಚಂದ್ರಹಾರ ಡಾಬು ಬಂಗಾರದ ಬಳೆಗಳನ್ನು ತೆಗೆದು ನೆಲಕ್ಕೆ ಹಾಕುತ್ತಾಳೆ. ಜಡೆಯನ್ನು ಬಿಚ್ಚಿ ಕೂದಲ ರಾಶಿಯನ್ನು ಹರವಿಕೊಳ್ಳುತ್ತಾಳೆ ನೆಲದ ಮೇಲೆ ಬಿದ್ದುಕೊಂಡು “ಅಯ್ಯೋ ಹತ ವಿಧಿ” ಅಂತ ಆ ಕಡೆ ಈ ಕಡೆ ಹೊರಳಾಡುತ್ತಾಳೆ.

(ಕೆಲವು ಕ್ಷಣಗಳಾದನಂತರ ಒಳಗೆ ಪ್ರವೇಶಿಸಿದ ದಶರಥನಿಗೆ ಎಲ್ಲಾ ಅಯೋಮಯವಾಗಿ ಹೆಜ್ಜೆ ನಿಧಾನವಾಗಿ ಇಡುತ್ತಾ ಕಾಲಿಗೆ ಬಡಿದ (ತಾಕಿದ) ಆಭರಣಗಳನ್ನು ದಾಟಿಕೊಳ್ಳುತ್ತಾ ಕೈಕೇಯಿಯನ್ನು ಕಾಣುತ್ತಾನೆ. ಆಶ್ಚರ್ಯಚಕಿತನಾಗಿ ಮುಂದಕ್ಕೆ ಬಾಗಿ ಅವಳ ಕೈಯನ್ನು ಮುಟ್ಟಲಿಕ್ಕೆ ಹೋದಾಗ ಅವನ ಕೈ ಬೆರಳುಗಳನ್ನು ಝಾಡಿಸಿ ತಳ್ಳಿ ಹಾಕುತ್ತಾಳೆ.

(ದಶರಥನು ಅವಳ ಪಕ್ಕದಲ್ಲಿ ಕೂತುಕೊಂಡು ಅಕ್ಕರೆಯಿಂದ ಕೈಕೇಯಿ–ಅಂತ ಕರೆದು ತನ್ನ ತೋಳ ತೆಕ್ಕೆಯಲ್ಲಿ ಬಂಧಿಸಲು ಹೋದಾಗ ಅವಳು ಇನ್ನೊಂದು ಬದಿಗೆ ತಿರುಗಿ ಮಲಗುತ್ತಾಳೆ.)

ದಶರಥ: ಪ್ರೇಯಸಿ ಸಮಾಚಾರವೇನು ? ಏಕೆ ಕೋಪಗೊಂಡಿರುವೆ ? ನಿನ್ನ ಆಜ್ಞೆಗಳನ್ನು ಯಾರಾದರೂ ಉಲ್ಲಂಘಿಸಿದರೆ? ಅಪ್ರಿಯವಾಗಿ ಯಾರಾದರೂ ಮಾತಾಡಿದರೇ ? ಸುಂದರಾಂಗಿ, ನಿನ್ನ ಈ ಕೋಪಕ್ಕೆ ಕಾರಣವೇನು ? ಈ ದಶರಥನು ನಿನ್ನವನಾಗಿರುವಾಗ ನಿನಗೇನು ಕಡಿಮೆಯಾಗಿದೆ.

(ಸಮಾಧಾನ ಕೊಡದೇ ಮತ್ತಷ್ಟು ಮುಸುಗು ಬಿಗಿಮಾಡಿಕೊಂಡು ಮಲಗುತ್ತಾಳೆ.)

ದಶರಥ: ತನ್ವೀ, ಸ್ತ್ರೀಯರಲ್ಲಿ ನಿನ್ನ ಹೊರತು, ಪುರುಷರಲ್ಲಿ ರಾಮನ ಹೊರತೂ ಪ್ರಿಯವಾದವರು ಯಾರೂ ಇಲ್ಲ. ನಿನ್ನ ಆಜ್ಞೆ ಅಂದರೆ ರಾಮನ ಆಜ್ಞೆ. ನಿನ್ನ ಇಚ್ಛೆ ಏನೋ ಹೇಳು ಅದನ್ನು ನಿನ್ನ ಆಜ್ಞೆ ಅಂತ ಭಾವಿಸುವೆ. ಇದೋ ಕೇಳು ನನ್ನ ರಾಮನ ಮೇಲೆ ಆಣೆಮಾಡಿ ಹೇಳುತ್ತಿದ್ದೇನೆ.

ಕೈ: (ಸ್ವಲ್ಪ ಕಣ್ಣು ತೆರೆದು) ನಾಥಾ, ರಾಮನ ಮೇಲೆ ಆಣೆ ಇಟ್ಟಿರಲ್ಲವೇ ? ಹಾಗಾದರೆ ನನ್ನ ಅಪೇಕ್ಷೆ ಈಡೇರುತ್ತದೆ. ನನ್ನ ಮನದಾಸೆ ಸಫಲವಾಗುತ್ತದೆ.

ದಶರಥ: ಪ್ರಾಣೇಶ್ವರಿ, ನಿನ್ನ ಮಾತನ್ನು ನಡೆಸಿಕೊಡುತ್ತೇನೆಂದು ಭಾಷೆ ಕೊಟ್ಟಿರುವೆನು. ಇನ್ನೂ ಅನುಮಾನವೇಕೆ? ಮಿತ್ರರು ಶತ್ರುಗಳಾಗಲೀ, ಪ್ರಜರು ದೂಷಣೆ ಮಾಡಲಿ, ಮಕ್ಕಳು ದೂರವಾಗಲೀ, ರಾಜ್ಯಲಕ್ಷ್ಮಿ ತೊರೆದು ಹೋಗಲಿ, ಎಂಥಾ ವಿಪತ್ತು ಎದುರಾದರೂ ನನ್ನ ಮಾತಿಗೆ ಬೇರೆ ಮಾತಿಲ್ಲಾ.

ಕೈ: ನಾಥಾ, ಈಗ ನಾನು ಹೇಳುವ ವಿಷಯ ತುಂಬಾ ಚಿಕ್ಕ ವಿಷಯ. ನೀವು ಪರಿಹಾಸ ಮಾಡಬಾರದು, ತಿಳಿಯಿತೇ? ನನಗೊಂದು ಧರ್ಮಸಂದೇಹ ಕಾಡುತ್ತಿದೆ. ಅದನ್ನು ಪರಿಹರಿಸಲು ಪಂಡಿತ ಪಾಮರರು ಇಲ್ಲ ಅಂತ ಅನ್ನಬೇಡಿ. ಇದರಲ್ಲಿ ಶಾಸ್ತ್ರಜ್ಞಾನವೇನು ಬೇಡ. ಅನುಭವ ಜ್ಞಾನ ಇದ್ದರೆ ಸಾಕು. ಇದು ತುಂಬಾ ಹಿಂದಿನ ವಿಷಯ. ಯಾವುದೋ ಒಂದು ಸಂದರ್ಭದಲ್ಲಿ ಒಬ್ಬ ಸಖಿ ನನಗೆ ಸಂತೋಷವನ್ನುಂಟು ಮಾಡಿದ್ದಾಳೆ. ಅದಕ್ಕೆ ನಾನು ನಿನಗೇನು ಬೇಕೋ ಕೇಳಿಕೋ? ಕೊಡುತ್ತೇನೆ, ಅಂತ ಅಂದಿದ್ದೇನೆ. ಈಗ ಬೇಡ ಬೇಕಾದಾಗ ಕೇಳಿಕೊಳ್ಳುತ್ತೇನೆ ಅಂತ ಅಂದಳು. ಇದು ನಡೆದು ಹಲವಾರು ವರುಷಗಳೇ ಕಳೆದಿವೆ. ಈ ವಿಷಯ ನಾನು ಮರೆತೇ ಹೋಗಿದ್ದೆ. ನಾಥಾ ದಿನ ಆ ಸಖಿ ಒಂದು ವಿಪರೀತವಾದದ್ದನ್ನೇ ಅಪೇಕ್ಷೆ ಪಡುತ್ತಾಳೆ. ಆಗ ವರ ಕೊಡುತ್ತೇನೆಂದಿದ್ದೀರಿ, ಆಗಲಿ ಇದು ಬೇಕದು ಬೇಕೆಂದು ಅವಳು ಕೇಳಿರಲಿಲ್ಲ. ನಾನು ಹೇಳಿರಲಿಲ್ಲ. ಈಗ ನಾನು ಇಲ್ಲಾ ಅಂದರೆ ಮಾತು ತಪ್ಪಿದವಳಾಗುತ್ತೇನಿ.

ದಶರಥ: ದೇವಿ ಸಂದೇಹವೇತಕೆ? ಸಂಕಲ್ಪ ಮಾಡುವುದು ಮುಖ್ಯ. ಕೊಡಬೇಕೆನ್ನುವುದು ನಿನ್ನಲ್ಲಿ ಎಂದು ಹುಟ್ಟಿತೋ ಆಗಲೇ ಅದು ದತ್ತವಾದಂತೆ. ಏನು ಕೇಳಲಿ, ಕೇಳಿದ್ದನ್ನು ಕೊಟ್ಟಾಗ ಕಾಲಹರಣ ದೋಷವಿರುವುದಿಲ್ಲ. ಧರ್ಮಕ್ಕೆ ವಿರುದ್ಧವಾಗಿ ನಡೆದುಕೋ ಬೇಡ. ನಿನ್ನ ಸಖಿಯ ಅಪೇಕ್ಷೆ ಏನೂಂತ ಹೇಳು. ನಾನೀಗಲೇ ನಡೆಸಿಕೊಡುತ್ತೇನೆ.

ಕೈ: ನಾಥಾ ಈ ದಿನ ಆಗೋ ಕೆಲಸ ನಾಳೆ ಆಗದೇ ಇರುವುದಕ್ಕೆ ಅವಕಾಶಗಳಿವೆ. ಬಯಸಿದ್ದು ಆಗದೇ ಇದ್ದರೆ...

ದಶರಥ: ಎಂಥಾ ಪರಿಸ್ಥಿತಿ ಬಂದರೂ ಆಡಿದ ಮಾತು ತಪ್ಪುವನಲ್ಲ.

ಕೈ: (ತೃಪ್ತಿಯಾಗಿ ಉಸಿರೆಳೆದು) ನಾಥಾ ಧರ್ಮದಲ್ಲೆ ಹುಟ್ಟಿ ಧರ್ಮದಲ್ಲೆ ಬೆಳೆದು, ಧರ್ಮಕ್ಕಾಗಿ ಪ್ರಾಣ ತ್ಯಾಗವಮಾಡಲು ಸಿದ್ಧರಿರುವ ನಿನ್ನಂಥವರಿಗೆ ಧರ್ಮಸೂಕ್ಷ್ಮಗಳು ಸುಲಭವಾಗಿ ತಿಳಿಯುತ್ತವೆ. ಇಲ್ಲಿಯವರೆಗೂ ನಾನು ಸೂಚ್ಯಾರ್ಥ ಸೂಚಕವಾಗಿ ಮಾತನಾಡಿರುವೆ. ಈಗ ಇದ್ದ ವಿಷಯವನ್ನು ತಿಳಿಸುವೆ. ದೇವಾಸುರ ಯುದ್ಧ ನಡೆದಾಗ ನೀವು ನನಗೆ ಎರಡು ವರಗಳನ್ನು ಕೊಟ್ಟಿರುವಿರಿ. ನೆನೆಪಿದೆ ತಾನೆ?

ದಶರಥ: (ಮುಗುಳುನಗೆ ನಕ್ಕು) ಪ್ರಾಣೇಶ್ವರಿ, ಅಂದೇ ಏನು ಇಂದೂ ನೀನು ಕೇಳಿದರೆ ಇಲ್ಲಾ ಅಂತೀನಾ? ಈ ದಶರಥನು ನಿನ್ನವನು ಅಲ್ಲವೇ? ಏನು ಬೇಕೋ? ಕೇಳಿಕೋ – ಖಂಡಿತ ಈ ಕ್ಷಣದಲ್ಲೆ ಬೇಕಾದರೆ ಕೊಡುವೆ.

ಕೈ: ನಾಥಾ, ಅಭಿಷೇಕಕ್ಕೆ ಎಲ್ಲಾ ಅಣಿಯಾಗಿದೆಯಲ್ವೇ? ಅದ ರಿಂದಲೇ ಭರತನಿಗೆ ಪಟ್ಟಾಭಿಷೇಕ ಮಾಡಿಸು. ಇದು ಮೊದ ಲನೇ ವರ ತಿಳಿಯಿತೆ?

(ದಶರಥ ಮುಖ ಕಳಾ ವಿಹೀನವಾಗುತ್ತದೆ. ದೇಹ ನಡುಗ ಲಾರಂಭಿಸುತ್ತದೆ. ಕೇಳಲಾರದ್ದನ್ನು ಕೇಳಿದಂತೆ ಎರಡೂ ಕಿವಿಗಳನ್ನು ಮುಚ್ಚಿಕೊಳ್ಳುತ್ತಾನೆ.)

ಕೈ: ರಾಮನಿಗೆ ನಾರುಮಡಿಯನ್ನು ಕೊಟ್ಟು ಹದಿನಾಲ್ಕು ವರುಷ ವನವಾಸಕ್ಕೆ ಈ ದಿನವೇ ಕಳಿಸಿಕೊಡಬೇಕು. ಇದು ಎರಡನೇ ವರ. ಇಕ್ಷ್ವಾಕು ವಂಶಕ್ಕೆ ಕಳಂಕ ಬಾರದಂತೆ ತಕ್ಷಣ ಇವು ಗಳನ್ನು ನೆರವೇರಿಸಿ ನಿನ್ನ ವಾಗ್ದಾನವನ್ನುಳಿಸಿಕೊ.

ದಶರಥ: (ಸಿಡಿಲು ಬಿದ್ದ ತೆಂಗಿನ ಮರದ ಹಾಗೆ ಕುಸಿದು ಬೀಳುತ್ತಾನೆ. ಕೆಲವು ಕ್ಷಣಗಳ ಮೌನ ನೆಲದ ಮೇಲೆ ಬಿದ್ದ ದಶರಥನು ದೇಹವನ್ನೆಳೆದುಕೊಳ್ಳುತ್ತಾ ಮುಂದೆ ಬಾಗಿ) ಕೈಕೇಯಿ ಇಷ್ಟು ಕಠಿಣ ಹೃದಯ ನಿನಗೆ ಎಲ್ಲಿಂದ ಬಂತು! ಇದು ನಿನಗೆ ಸರಿ ಅಲ್ಲ. ನನ್ನ ಪ್ರೇಯಸಿಯ ಹೃದಯ ನವನೀತವಿದ್ದಂತೆ. ಇಂಥ ಹುಚ್ಚು ಬಯಕೆಯನ್ನು ಎಂದೂ ಬಯಸಲಾರಳು. ಹೇಳು ಕೈಕೇಯಿ, ಈಗ ನೀನು ಕೇಳಿದ್ದು ಪರಿಹಾಸ ಮಾಡ ಲಿಕ್ಕೆಂದು, ಈಗ ಆಡಿದ ಮಾತು ನಿಜವಲ್ಲವೆಂದು ಹೇಳು. ಅಯ್ಯೋ ಕೈಕೇಯಿ! ನೀನು ಮಾತನಾಡದಿದ್ದರೆ ನನ್ನ ಜೀವ ಉಳಿಯುವುದಿಲ್ಲ!

ಕೈ: (ಬಾಲ ತುಳಿದ ನಾಗಿನಿಯಂತೆ ಒಮ್ಮೆಗೇ ಮೇಲೆದ್ದು) ಎಲೋ ಮೂರ್ಖ, ನೀನು ಕೊಟ್ಟ ವಚನಕ್ಕೆ ಇಂಥಾ ವರಗಳಲ್ಲದೇ, ಒಂದು ಹಿಡಿ ಬತ್ತದರಳು ಕೇಳುತ್ತೇನೆಂದು ತಿಳಿದುಕೊಂಡಿರು ವಿಯಾ? ನಾಥಾ, ಭಾಷೆ ಯಾಕೆ ಕೊಟ್ಟೆ? ನಿನಗೆ ಸಾಧ್ಯ ವಾದರೆ ನನ್ನ ಅಪೇಕ್ಷೆಯನ್ನು ಪೂರೈಸುತ್ತೇನೆಂದು ಹೇಳು, ಇಲ್ಲದಿದ್ದರೆ ನಿರ್ಭಿಡೆಯಾಗಿ ಹೇಳು-ಆಗುವುದಿಲ್ಲ ಅಂತ. ಇದರಲ್ಲಿ ತರ್ಕ ವಿತರ್ಕವೇತಕ್ಕೆ?

ದಶರಥ: ಕೈಕೇಯಿ, ರಾಮ ನಿನಗೆ ಮಾಡಿದ ದ್ರೋಹವೇನು? ಹೆತ್ತತಾಯಿಗಿಂತ ಹೆಚ್ಚಾಗಿ ನೋಡಿಕೊಂಡಿದ್ದಂತೆ, ಇದೇನಾ ನೀನು ಅವನಿಗೆ ಕೊಡುವ ಪ್ರತಿಫಲ? ಕೌಸಲ್ಯೆ ಸುಮಿತ್ರೆಯ ರನ್ನು ತ್ಯಜಿಸು ಅಂತ ಅಂದರೂ ನಾನು ಇಷ್ಟು ದುಃಖ ಪಡುವುದಿಲ್ಲ. ರಾಜ್ಯ ಬೇಕೆಂದು ಕೇಳಿದರೂ ಸಂಶಯಪಡದೇ ಕೊಟ್ಟು ಬಿಡುವೆ. ಆದರೆ ನನ್ನ ರಾಮನನ್ನ ನಾನು ಹೇಗೆ ಬಿಟ್ಟು ಇರಲಿ? ಹೇಳು ಕೈಕೇಯಿ!

ಕೈ: ಸಾಕು ಸುಮ್ಮನಿರಿ, ನನಗೆಲ್ಲಾ ಗೊತ್ತಿದೆ. ನಿಮಗೆ ಮೊದಲಿ ನಿಂದಲೂ ಕೌಸಲ್ಯೆ ಅಂದರೆ ತುಂಬಾ ಪ್ರೀತಿ. ನಾನಾಗಲಿ, ಭರತನಾಗಲೀ ಎಲ್ಲ ಹಾಳಾದರೂ ಅದರ ಗೊಡವೆಯೇ ನಿಮಗಿಲ್ಲ.

ದಶರಥ: ಎಲೇ ಪಾತಕಿ! ಈ ದುಷ್ಟ ಬುದ್ಧಿ ನಿನಗೆ ಹುಟ್ಟಿದ್ದು ಅಲ್ಲ. ನಿನ್ನ ಮಗ ಭರತನ ಮನಸ್ಸು ನಿನಗೆ ಗೊತ್ತಿಲ್ಲ. ಭರತನು ತನಗೆ ಪಟ್ಟಾಭಿಷೇಕಕ್ಕಾಗಲಿ ರಾಮನು ವನವಾಸಕ್ಕೆ ಹೋಗುವು ದಾಗಲೀ ಇಷ್ಟಪಡುತ್ತಾನೆಂದು ತಿಳಿದಿರುವೆಯಾ, ಅಯ್ಯೋ ನಿನ್ನ ಮಾತಿಗೆ ಒಪ್ಪಿಕೊಂಡು ಹಿರಿಯರ ಸಮ್ಮುಖ ದಲ್ಲಿ ಹೇಗೆ ತಲೆ ಎತ್ತಿಕೊಂಡಿರಲಿ?

(29 ನೇ ಪುಟ ನೋಡಿ)

# ತಿರುವಾಯ್ ಮೊಳಿ

**ಶ್ರೀ ಡಿ. ಕೃಷ್ಣಯ್ಯಂಗಾರ್**

ದಿವ್ಯ ಪ್ರಬಂಧಗಳಲ್ಲಿ ತಿರುವಾಯ್ ಮೊಳಿಗೆ ವೇದದಷ್ಟೇ ಪ್ರಾಮುಖ್ಯತೆ ಇದೆ. ತಿರುವಾಯ್‌ಮೊಳಿ ಎಂದರೆ ಒಳ್ಳೆಯ ಮಾತು ಎಂದರ್ಥ. ಇದನ್ನು ನಲ್ಲುಡಿ, ಚೆನ್ನುಡಿ ಪರಾಶುದ್ಧವಾದ ನುಡಿ, ಪರಮಾತ್ಮ ವಿಷಯಕವಾದ ನುಡಿ ಎಂದು ಹೇಳಬಹುದು. ಇದರಲ್ಲಿ 1102 ಪದ್ಯಗಳಿವೆ. ಇದನ್ನು ಹತ್ತು ಶತಕಗಳನ್ನಾಗಿ ವಿಭಾಗಿಸಿ ಒಂದೊಂದು ಶತಕವನ್ನು ಹತ್ತು ದಶಕಗಳನ್ನಾಗಿ ವಿಂಗಡಿಸಲಾಗಿದೆ. ಒಂದೊಂದು ದಶಕದಲ್ಲಿ ಹನ್ನೊಂದು ಪದ್ಯಗಳಿವೆ. ಕೊನೆಯ ಪದ್ಯ ಫಲಶ್ರುತಿಯಾಗಿದೆ

ಪ್ರಪನ್ನಜನ ಕೂಟಸ್ಥರೆಂದ ಹೆಸರಾಂತ ಪರಾಂಕುಶಮುನಿಗಳು (ನಮ್ಮಾಳ್ವಾರ್ ಅವರು) ಪರಮಾತ್ಮನನ್ನು ಕುರಿತು ಹಾಡಿರುವ ತಿರುವಾಯ್‌ಮೊಳಿಯು ಪರಮಾತ್ಮ ಸಾಕ್ಷಾತ್ಕಾರದ ಪರಿಪೂರ್ಣ ಅನುಭವವಾಗಿದೆ. ವಾಲ್ಮೀಕಿ ಮಹರ್ಷಿಯು ಶ್ರೀರಾಮ ಕಥೆಯನ್ನು ಸಾಕ್ಷಾತ್ಕರಿಸಿಕೊಂಡಂತೆ ಪರಾಂಕುಶ ಮುನಿಗಳು ಪರಮಾತ್ಮನ, ರೂಪ ಸ್ವರೂಪ, ಗುಣ, ವಿಭವ, ಐಶ್ವರ್ಯಾದಿಗಳನ್ನು ಸಾಕ್ಷಾತ್ಕರಿಸಿಕೊಂಡು, ಸ್ವಾಮಿಯ ನಿತ್ಯ ಕೈಂಕರ್ಯದಲ್ಲಿ ನಿರತರಾಗಿರಬೇಕೆಂಬುದನ್ನು ಇಲ್ಲಿ ಬಹುಚೆನ್ನಾಗಿ ವಿವರಿಸಿದ್ದಾರೆ.

ತಿರುವಾಯ್ ಮೊಳಿಯು ಉಪನಿಷತ್ತಿಗೆ ಸಮಾನವಾಗಿದೆ. ಇದನ್ನು "ಶಠಜಿದುಪನಿಷತ್ ಸಾರಃ, ಸಾರಸ್ವತಾನಾಂ ಶಠರಿಪು ಫಲಿತಂ ಶಾಂತ ಸಿದ್ಧಾಂತ ಸೀಮಾ" ಎಂದು ವೇದಾಂತದೇಶಿಕರು ಕೊಂಡಾಡಿದ್ದಾರೆ. ಪರಮಾತ್ಮನನ್ನು ಪಡೆಯಬೇಕೆಂಬ ತೀವ್ರತರ ಹಂಬಲ ಇಲ್ಲಿ ವ್ಯಕ್ತವಾಗಿದೆ. ವೇದ, ಇತಿಹಾಸ, ಪುರಾಣಾದಿಗಳು ಮಾಡುವ ಕೆಲಸವನ್ನು ತಿರುವಾಯ್ ಮೊಳಿಯು ಮಾಡುತ್ತದೆ.

ಯತ್ತತ್ ಕೃತ್ಯಂ ಶ್ರುತೀನಾಂ<br>
ಮುನಿಗಣ ವಿಹಿತೈಃ<br>
ಸೇತಿಹಾಸೈ ಪುರಾಣೈಃ|<br>
ತತ್ರಾಸೌ ಸರ್ವಸೀಮ್ನಃ<br>
ಶಠಮಥ ಮುನೇಃ<br>
ಸಂಹಿತಾ ಸಾರ್ವಭೌಮೀ ||

ಎಂದು ಪ್ರಶಂಸೆ ಮಾಡಲಾಗಿದೆ.

ತಿರುವಾಯ್ ಮೊಳಿಯು ವೇದ, ಶಾಸ್ತ್ರ, ಇತಿಹಾಸಗಳ ಮುಖ್ಯ ತಾತ್ಪರ್ಯವಾದ ಅರ್ಥಪಂಚಕವನ್ನು ಬಹು ಚೆನ್ನಾಗಿ ನಿರೂಪಿಸುತ್ತದೆ. ಪ್ರಾಪ್ಯವಾದ ಬ್ರಹ್ಮಸ್ವರೂಪ, ಪ್ರಾಪ್ತಿಯನ್ನು ಪಡೆಯುವ ಜೀವಸ್ವರೂಪ, ಅದನ್ನು ಪಡೆಯುವ ಸಾಧನವಾದ ಉಪಾಯ ಸ್ವರೂಪ ಮತ್ತು ಫಲಸ್ವರೂಪ, ಪ್ರಾಪ್ತಿಗಿರುವ ವಿರೋಧ ಸ್ವರೂಪ– ಇವೇ ಅರ್ಥಪಂಚಕಗಳು. ಈ ಅಂಶಗಳನ್ನು ಹೀಗೆ ಒಟ್ಟುಗೂಡಿಸಬಹುದು.

ಪರಮಾತ್ಮನೇ ಮೋಕ್ಷಕ್ಕೆ ಉಪಾಯಭೂತನು. ಅವನೇ ಪ್ರಾಪ್ಯನು. ದಿವ್ಯ ಮಂಗಳ ವಿಗ್ರಹ ವಿಶಿಷ್ಟನು. ಪ್ರಾಪಕನೂ ಅವನೇ ಆಗಿದ್ದಾನೆ. ಅವನನ್ನು ಬಿಟ್ಟರೆ ಬೇರೆ ಪ್ರಾಪ್ಯವಿಲ್ಲ. ಹೀಗೆ ಮಹತ್ವಪೂರ್ಣವಾದ ಈ ಪ್ರಬಂಧದ ಪ್ರತಿಯೊಂದು ಪದ್ಯದಲ್ಲಿಯೂ ಸ್ವಾಮಿಯ ಒಂದೊಂದು ಕಲ್ಯಾಣ ಗುಣಗಳನ್ನು ಕೊಂಡಾಡಲಾಗಿದೆ.

ತಿರುವಾಯ್‌ಮೊಳಿಯು ಸರ್ವೋತ್ತಮ ಕಾವ್ಯ. ಪರಮಾತ್ಮನನ್ನು ಅರೆಕ್ಷಣವೂ ಬಿಟ್ಟಿರಲಾಗದ ಸ್ಥಿತಿಯನ್ನು ಇಲ್ಲಿ ವಿವರಿಸಲಾಗಿದೆ. ಇಲ್ಲಿ ತಿಳಿಸಿರುವ ಆತ್ಮ ನಿವೇದನ ಅನುಪಮ ರೀತಿಯದು. ಒಂದೊಂದು ಪದ್ಯವೂ ಭಾವಪೂರ್ಣವಾಗಿದೆ. ಅವನ್ನು ಎಷ್ಟು ಸಲ ವ್ಯಾಸಂಗಮಾಡಿದರೂ, ಅಷ್ಟು ಗಹನ ವಿಷಯಗಳು ಗೋಚರವಾಗುವುವು.

ತಿರುವಾಯ್‌ಮೊಳಿಯು, ಪರಮಾತ್ಮನಲ್ಲಿ ಪಡೆಯುವ ಸಾಯುಜ್ಯವನ್ನು ಮನಸ್ಸಿಗೆ ಹೀಗೆ ತಿಳಿಸುತ್ತದೆ. "ಹೇ! ಮನಸ್ಸೇ ಅಪ್ರಮೇಯ ಮಹಿಮೆಯುಳ್ಳವನೂ, ನಿರತಿಶಯಾನಂದವನ್ನು ಕರುಣಿಸುವವನೂ ಆಗಿರುವ ಪರಮಾತ್ಮನನ್ನು, ಅಜ್ಞಾನವನ್ನು ಧ್ವಂಸ ಮಾಡಿ ತನ್ನ ತೇಜಸ್ಸಿನ ಪ್ರಭಾವದಿಂದ ಚೇತನರಿಗೆ ಜ್ಞಾನಭಕ್ತ್ಯಾದಿಗಳನ್ನು ಅನುಗ್ರಹಿಸುವವನೂ, ನಿತ್ಯಸೂರಿಗಳಿಗೆ ನಾಯಕನಾಗಿ ಪರಂಜ್ಯೋತಿ ಎನಿಸಿರುವವನೂ ಆದ ಶ್ರಿಯಃಪತಿಯ ಪಾದಾರವಿಂದಗಳನ್ನು ಭಜಿಸಿ ಉಜ್ಜೀವಿಸು"

ಪರಮಾತ್ಮನು ಜ್ಞಾನನಿಧಿಯು, ಇಂದ್ರಿಯಾತೀತನು, ಕಾಲಕ್ರಮದಲ್ಲಿ ಅವನಿಗೆ ಸಮರಾಗಲಿ, ಮೇಲ್ಪಟ್ಟವರಾಗಲಿ ಯಾರೂ ಇಲ್ಲ. ಇಂತಹ ಸರ್ವೋತ್ತಮ ಸ್ವಾಮಿಯು ಎಲ್ಲರಿಗೂ ಅಂತರಾತ್ಮನಾಗಿದ್ದಾನೆ. ಸೃಷ್ಟಿ ಕಾಲದಲ್ಲಿ ಅವನು ಪಂಚಭೂತಗಳಲ್ಲಿ ತಾನೇ ನಿಂತು, ಸ್ಥಿತಿಕಾಲದಲ್ಲಿ ಎಲ್ಲರಿಗೂ ಆತ್ಮನಾಗಿ ಅಂತಸ್ಸ್ಥನಾಗಿ ವ್ಯಾಪಿಸಿ, ಪ್ರಳಯ ಕಾಲದಲ್ಲಿ ಎಲ್ಲವನ್ನೂ ತನ್ನ ಉದರದಲ್ಲಿಟ್ಟು ರಕ್ಷಿಸುವ ದೇವದೇವನು. ವೇದ ವೇದಾಂತಾದಿ ಶಾಸ್ತ್ರಗಳಲ್ಲಿ ಪ್ರತಿಪಾದಿತನಾಗಿರುವ ಇಂತಹ ಸ್ವಾಮಿಯನ್ನು ಭಜಿಸು ಎಂದು ತಿಳಿಸಲಾಗಿದೆ.

ತಿರುವಾಯ್‌ಮೊಳಿಯು ನಾಯಕ, ನಾಯಕಿ ಭಾವವನ್ನು ಬಹು ಚೆನ್ನಾಗಿ ವಿವರಿಸುತ್ತದೆ. ಪರಾಂಕುಶ ಮುನಿಗಳು, ತಮ್ಮನ್ನು ವಿರಹಪೀಡಿತಳಾದ ನಾಯಕಿಯನ್ನಾಗಿ ಭಾವಿಸಿಕೊಂಡು, ತನ್ನ ನಾಯಕನನ್ನು ಸೇರುವ ಪ್ರಯತ್ನದಲ್ಲಿ ಯಾವ ಯಾವ ಅವಸ್ಥೆ ಪಡೆಯುವಳೋ ಅವೆಲ್ಲವನ್ನೂ ತಮ್ಮಲ್ಲಿ ಆರೋಪಿಸಿಕೊಂಡು, ಆ ಸಂದರ್ಭಗಳನ್ನು ಸೊಗಸಾಗಿ ವರ್ಣಿಸಿದ್ದಾರೆ. ಭಕ್ತಕನ್ಯೆಯು ನಾಯಕನಾದ ಪರಮಾತ್ಮನನ್ನು ಪ್ರಥಮವಾಗಿ ನೋಡಿ ಮೋಹಿಸುವಳು. ಅದೇ ದರ್ಶನವನ್ನು ಪದೇ ಪದೇ ಪಡೆಯಬೇಕೆಂದು ಹಂಬಲಿಸುವಳು. ಆದರೆ ಅದು ಸಿಗುವುದಿಲ್ಲ. ಅವಳಿಗೆ ಇತರ ಕೆಲಸಗಳಲ್ಲಿ ಉದಾಸೀನ ಹುಟ್ಟುವುದು ಆಹಾರಾದಿಗಳನ್ನು ತೊರೆಯುವಳು ಬಂಧುಗಳ ಮಾತು ಅವಳಿಗೆ ರುಚಿಸುವುದಿಲ್ಲ ಇಂತಹ ಅವಸ್ಥೆಯನ್ನು ತಾಯಿಯು ಗಮನಿಸುವಳು. ಇವನ್ನು ಅವಳ ಸಖಿಯರು ತಿಳಿಯುವರು. ಪ್ರಿಯನ ವಿರಹದಲ್ಲಿ ನಾಯಕಿ ಉಪವಾಸ ಮಾಡುವಳು. ಜಾಗರ

ಮಾಡುವಳು. ನಾಯಕನನ್ನು ಕುರಿತು ಸ್ತೋತ್ರಮಾಡುವಳು. ಜಗತ್ತಿನಲ್ಲಿ ಎಲ್ಲವೂ ಸ್ವಾಮಿಯೇ ಆಗಿರುವಾಗ, ಎಲ್ಲರಿಗೂ ಸಂತೋಷವನ್ನುಂಟುಮಾಡುವುದು ಅವನ ಸ್ವಭಾವವಾಗಿರುವಾಗ ತನಗೇಕೆ ಹೀಗೆ ಮಾಡುವನು:– ಎಂದು ನಾಯಕನಲ್ಲಿ ಮೊರೆ ಇಡುವಳು. ಅವನ ಗುಣ ಗಾನ ಮಾಡುವಳು. ಆದರೂ ನಾಯಕನು ಬರುವುದಿಲ್ಲ. ಪಕ್ಷಿ, ಮೋಡ, ಮುಂತಾದುವುಗಳ ಮೂಲಕ ಅವನಿಗೆ ಸಂದೇಶ ಕಳುಹಿಸುವಳು. ನಾಯಕನಿಗೆ ಸಂಬಂಧಪಟ್ಟ ವಸ್ತುಗಳನ್ನು ತನ್ನದೆನ್ನುವಳು. ಹಾಗಾದರೂ ಬಗಲೆಂದು ಕೂಗುವಳು, ಪ್ರಲಾಪಿಸುವಳು. ಹುಚ್ಚಿಯಂತೆ ವರ್ತಿಸುವಳು. ತನ್ನನ್ನು ತಾನೇ ಹಳಿದುಕೊಳ್ಳುವಳು. ನಾಯಕನಿಲ್ಲದ ತನ್ನ ಜೀವನ ವ್ಯರ್ಥವೆನ್ನುವಳು. ಸಮುದ್ರತೀರ, ಪರ್ವತಪ್ರದೇಶ, ಕಾಡು, ಮೇಡು, ಸುಂದರ ಉದ್ಯಾನ, ಇತ್ಯಾದಿಗಳಲ್ಲಿ ಅಲೆಯುವಳು. ಅಲ್ಲಿ ಮೃಗಪಕ್ಷಿಗಳ ಸರಸ ಸಲ್ಲಾಪ ಇವಳನ್ನು ಅಣಕಿಸುವಂತೆ ಕಾಣುವುದು.

ಹೀಗೆ ನಾಯಕಿಗೆ, ನಾಯಕನ ವಿರಹ ವೇದನೆ ಹೆಚ್ಚಿ ಸಹಿಸಲಾಗದೆ, ಪ್ರಾಣ ಬಿಡುವ ಸಂದರ್ಭ ಬರುವುದು. ಕರುಣಾಮಯಿಯಾದ ನಾಯಕನು ಇದನ್ನು ಸಹಿಸಿಯಾನೆ! ಸಾವಕಾಶವಾದರೆ ಅನರ್ಥ ಸಂಭವಿಸಬಹುದೆಂದು ನಾಯಕನು ಬಂದು ನಾಯಕಿಯ ವಿರಹ ವೇದನೆಯ ಕೊರತೆಯನ್ನು ನೀಗಿಸುವನು. ನಾಯಕನು ತನ್ನ ತಪ್ಪನ್ನು ಒಪ್ಪಿಕೊಂಡು ನಾಯಕಿಯನ್ನು ಸಮಾಧಾನಪಡಿಸುವನು. ನಾಯಕಿಯ ಮನಸ್ಸಿನಲ್ಲಿ ವಿಚಿತ್ರ ಪರಿವರ್ತನೆಯಾಗುವುದು. ನಾಯಕನ ಅವ್ಯಾಜ ಕರುಣೆಯನ್ನು ತಾನು ತಪ್ಪಾಗಿ ಭಾವಿಸಿದುದಕ್ಕಾಗಿ ಅವಳು ಪರಿತಪಿಸುವಳು. ತಾನು ಅವನ ಕೃಪೆಗೆ ಅನರ್ಹಳೆಂದು ಓಡುವುದಕ್ಕೆ ಯತ್ನಿಸುವಳು. ದಯಾಮಯನಾದ ನಾಯಕನು ಅವಳನ್ನು ಹಿಡಿದು ನಿಲ್ಲಿಸುವನು. ಆಗ ಮಾನವಶಕ್ತಿಯ ಮಿತಿಯು ತಿಳಿಯುವುದು. ನಾಯಕಿಗೆ ಆಗ ಶರಣಾಗತಿಯಲ್ಲದೆ ಬೇರೆ ಮಾರ್ಗವಿರುವುದಿಲ್ಲ.

ಪರಮಾತ್ಮನ ಕರಸ್ಪರ್ಶದಿಂದ ನಾಯಕಿಗೆ ಬ್ರಹ್ಮಸಾಕ್ಷಾತ್ಕಾರವಾಗುವದು. ನಾಯಕಿಯು ಕಣ್ಣು ತೆರೆದು ನೋಡುವಳು. ತನ್ನ ಮುಂದೆ ಚಿರಕಾಂಕ್ಷಿತನಾದ ಶ್ರೀಮನ್ನಾರಾಯಣನ ದಿವ್ಯಮಂಗಳವಿಗ್ರಹವಿರುವುದನ್ನು ಕಂಡು ಹಿರಿಹಿಗ್ಗುವಳು. ಅವನೊಡನೆ ಪರಮಪದಕ್ಕೆ ಹೋಗುವಳು. ಅಲ್ಲಿ ಅವಳಿಗೆ ದೊರೆತ ಸ್ವಾಗತವನ್ನು ತಿರುವಾಯ್‌ಮೊಳಿಯು ಬಹುಚೆನ್ನಾಗಿ ತಿಳಿಸುತ್ತದೆ. ಇಂತಹ ಸ್ವಾಗತವು ಎಲ್ಲ ಭಕ್ತರಿಗೂ ದೊರೆಯುವುದೆಂದು ಅದು ಸ್ಪಷ್ಟಪಡಿಸುತ್ತದೆ. ಇಂತಹ ಅನುಭವವನ್ನು ಪರಾಂಕುಶಮುನಿಗಳು ಸ್ವತಃ ಅನುಭವಿಸಿ ಇತರರೂ ತಿಳಿಯಲಿ ಎಂದು ವರ್ಣಿಸಿದ್ದಾರೆ.

ತಿರುವಾಯ್‌ಮೊಳಿಯ ಪ್ರಾರಂಭದ ಪದ್ಯಗಳಲ್ಲಿ "ಸತ್ಯಂ ಜ್ಞಾನಮನಂತಂ ಬ್ರಹ್ಮ" 'ಸರ್ವಂ ಖಲ್ವಿದಂ ಬ್ರಹ್ಮ' "ಆನಂದಂ ಬ್ರಹ್ಮ'' ಮುಂತಾದ ಶ್ರುತಿ ವಾಕ್ಯಗಳ ವಿವರಣೆ ಇದೆ.

ಉಯರ್ವರ ವುಯರ್ ನಲ
ಮುಡೈಯವ‌ರ್ ಯವನವ‌ರ್ ।
ಮಯರ್ವರ ಮದಿನಲ
ಮರುಳಿನರ್ ಯವನವರ್ ॥
ಅಯರ್ವರು ಯಮರರ್
ಕದಿಪತಿಯವನವ‌ರ್ ।
ತುಯರರು ಶುಡರಡಿ
ತೊಳ ದೆಳುನ್ನನನೇ ॥

(26ನೇ ಪುಟ ನೋಡಿ)

# ಕಪಿಲೇಶ್ವರಸ್ವಾಮಿ ದೇವಾಲಯ

## ತಿರುಪತಿ

ತಿರುಪತಿಯಿಂದ ತಿರುಮಲೆಗೆ ಹೊರಡುವ ಹಾದಿಯಲ್ಲಿ ತಿರುಪತಿಯ ಉತ್ತರ ಭಾಗದಲ್ಲಿ ಬೆಟ್ಟದ ತಪ್ಪಲಿನಲ್ಲಿರುವ ಸುಂದರ ಪ್ರಶಾಂತ ದೇವಾಲಯ. ಇಲ್ಲಿನ ದೊಡ್ಡ ಜಲಪಾತ ಮಳೆಗಾಲದಲ್ಲಿ ತುಂಬಿ ಧುಮುಕುವುದು. ಆಳ್ವಾರ್ ತೀರ್ಥವೆಂದೂ ಹೆಸರಿರುವ ಇಲ್ಲಿ ಕಪಿಲ ಮಹರ್ಷಿ ಪೂಜಿಸಿದ ಈಶ್ವರ ಲಿಂಗವಿದ್ದು ಸಕಲ ಹಿಂದೂಗಳನ್ನೂ ಏಕತ್ರ ಆಕರ್ಷಿಸುತ್ತದೆ. ತಿರುಪತಿಯಿಂದ ನಡೆದೂ ಹೋಗಬಹುದು. ಸ್ಥಳೀಯ ವಾಹನ ಸೌಕರ್ಯವೂ ಉಂಟು.

## ಆಲಯ ಕಾರ್ಯಕ್ರಮ ವಿವರ

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ರಿಂದ 5–30 ವರೆಗೆ |
| ಸರ್ವದರ್ಶನ | ,, | 5–30 ರಿಂದ 9–30 ವರೆಗೆ |
| ಅಭಿಷೇಕ | ,, | 9–30 ರಿಂದ 10–30 ವರೆಗೆ |
| ಮೊದಲ ಬಲಿ, ಘಂಟಿ | ,, | 10–30 ರಿಂದ 10–45 ವರೆಗೆ |
| ಸರ್ವದರ್ಶನ | ,, | 10–45 ರಿಂದ 11–30 ವರೆಗೆ |
| ಎರಡನೇ ಬಲಿ, ಘಂಟಿ | ,, | 11–30 ರಿಂದ 11–45 ವರೆಗೆ |
| ಸರ್ವದರ್ಶನ | | 11–45 ರಿಂದ ಮಧ್ಯಾಹ್ನ 4–00 ವರೆಗೆ |
| ಅಭಿಷೇಕ (ಆರ್ಜಿತ) | ಮಧ್ಯಾಹ್ನ | 4–00 ರಿಂದ 4–30 ವರೆಗೆ |
| ಅರ್ಚನೆ (ಆರ್ಜಿತ) | ,, | 4–30 ರಿಂದ 5–30 ವರೆಗೆ |
| ರಾತ್ರಿ ಘಂಟಿ | ಸಂಜೆ | 5–30 ರಿಂದ 5–45 ವರೆಗೆ |
| ಸರ್ವದರ್ಶನ | ,, | 5–45 ರಿಂದ 6–00 ವರೆಗೆ |
| ದೀಪಾರಾಧನೆ | ,, | 6–00 ರಿಂದ 6–30 ವರೆಗೆ |
| ಸರ್ವದರ್ಶನ | ,, | 6–30 ರಿಂದ 7–30 ವರೆಗೆ |
| ಏಕಾಂತಸೇವೆ | ರಾತ್ರಿ | 7–30 ರಿಂದ 8–00 ವರೆಗೆ |

ಆರ್ಜಿತಸೇವಾಕಾಲದಲ್ಲಿ ರೂ ॥ 1–00 ಶುಲ್ಕದಿಂದ ಒಬ್ಬರು ದರ್ಶನಕ್ಕೆ ಅನುಮತಿಸಲ್ಪಡುವರು.

ಪೇಷ್ಕಾರ್.

# ತಿರುವಾಯ್‌ಮೊಳಿ ಹಾಗೂ ಶ್ರೀಭಾಷ್ಯ

“ಅಥಾತೋ ಬ್ರಹ್ಮಜಿಜ್ಞಾಸಾ” ಎಂದು ಶಾರೀರಕ ಮೀಮಾಂಸೆಯ ಆರಂಭಸೂತ್ರ. “ಉಯರ್ವರ ಉಯರ್‌ನಲಂ ಉಡೈಯವನ್ ಯವನ್ ಅವನ್” ಎಂಬ ಶಾರೀರಕ ವಸ್ತುವನ್ನು ತಿಳಿಸುವ ಸೂತ್ರ ಆದಿವಾಕ್ಯ.

ಬ್ರಹ್ಮಶಬ್ದ ಬೃಹತ್ತ್ವ ವೆಂಬ ಗುಣ ವಿಶಿಷ್ಟವಾದ ಮತ್ತು ಬೃಹತ್ ಸ್ವರೂಪವಾದ ವಸ್ತುವನ್ನು ತೋರಿಸುತ್ತದೆ.

“ನಲಮುಡೈಯವನ್ ಯವನ್” ಎಂಬ ಪದಗಳು ನಿರತಿಶಯವಾದ ಬೃಹತ್ತ್ವಧರ್ಮದೊಡನೆ ಕೂಡಿದ ಕಲ್ಯಾಣಗುಣಗಳನ್ನು ತನ್ನವಶದಲ್ಲಿ ನಿತ್ಯ ವಿಶೇಷಣವಾಗಿ ಇಟ್ಟುಕೊಂಡಿರುವ ಮಹದ್ವಸ್ತುವನ್ನು ತೋರಿಸುತ್ತದೆ.

ಎರಡನೆಯ ಸೂತ್ರ “ಜನ್ಮಾದ್ಯಸ್ಯಯತಃ” ಎಂಬುದು. ಆಜಗತ್ತಿನಲ್ಲಿ ಡಗಿರುವ ಜ್ಞಾನಸ್ವರೂಪವಾದ ಮತ್ತು ಜ್ಞಾನಸ್ವರೂಪವಲ್ಲದ ಸಮಸ್ತ ವಸ್ತುಗಳ ಉತ್ಪತ್ತಿ, ಅನುವರ್ತಿ ಮತ್ತು ಸಂವೃತ್ತಿಗಳಿಗೆ ಕಾರಣವಾದದ್ದೆಂದು ಕಂಡುಬರುತ್ತದೆ. ಆದ್ದರಿಂದ ಕರ್ತೃತ್ವ ಬ್ರಹ್ಮಕ್ಕೆ ಸೇರಿದ ಧರ್ಮ. ಇತರ ಪದಾರ್ಥ ಕರ್ತೃತ್ವ ಸಹಜ ಧರ್ಮವಲ್ಲದುದರಿಂದ ಅವುಗಳು ಬ್ರಹ್ಮಾಧೀನವಾಗಿಯೇ ಸರ್ವವಿಧದಲ್ಲೂ ಉಳಿದುಕೊಳ್ಳಬೇಕಾಗುತ್ತದೆ. ಆದ್ದರಿಂದ ಜೀವನಿಗೆ ಲಭ್ಯವಾಗುವ ಜ್ಞಾನವಿಕಾಸ ಬ್ರಹ್ಮಾಧೀನ “ಮಯಿದ್ವರ ಮದಿನಲಮರುಳಿನನ್” ಎಂಬ ವಾಕ್ಯದಲ್ಲೂ ದೋಷಶೂನ್ಯವಾದ ಮತ್ತು ಭಕ್ತಿಯ ಮೇಲ್ಮಟ್ಟವನ್ನು ಹೊಂದಬಲ್ಲ ಜ್ಞಾನವನ್ನೂ ಅದರ ಫಲವಾದ ಆನಂದವನ್ನೂ ಈಶ್ವರನು ಸ್ವಯಂ ನೀಡುತ್ತಾನೆ ಎಂದು ಎರಡನೆಯ ಸೂತ್ರ ಸೂಚಿಸುತ್ತದೆ. ಆದ್ದರಿಂದ ಸೃಷ್ಟಿ, ಲಯ ಮತ್ತು ಸರ್ವವಿಧವಾದ ರಕ್ಷಣೆ ನೀಡಬಲ್ಲ ವ್ಯಕ್ತಿ “ಯವನ್” ಪದಲಬ್ಧವಾದ “ಅವನ್” ಎಂಬ ಶಬ್ದದಿಂದ ವೇದ್ಯವಾಗುತ್ತದೆ. ಇದರಿಂದ ಜಗದ್ವ್ಯಾಪಾರದಲ್ಲಿ ಉಳಿದುಕೊಳ್ಳುವುದಕ್ಕಾಗಲೀ ಅಥವಾ ಜಗತ್ಸಂಬಂಧವನ್ನು ತಪ್ಪಿಸಿಕೊಂಡು ಸದಾ ಆನಂದ ಪಡುವುದಕ್ಕಾಗಲೀ ಜೀವನಿಗೆ ಸ್ವತಃ ಆಸ್ಪದವೇ ಇಲ್ಲ ಎಂದು ಭಾಸವಾಗುತ್ತದೆ.

ಮೂರನೆಯ ಸೂತ್ರ “ಶಾಸ್ತ್ರಯೋನಿತ್ವಾತ್” ಎಂಬುದು. ಶಾಸ್ತ್ರ ಎಂದರೆ ವಸ್ತುಗಳನ್ನು ಪರಸ್ಪರವಾಗಿ ವಿಂಗಡಿಸಿ ಅವುಗಳ ಪ್ರತ್ಯೇಕ ಸ್ವರೂಪಸ್ವಭಾವಗಳನ್ನು ಮನಗಾಣಿಸಿ ಅವುಗಳ ವೃತ್ತಿಯನ್ನು ವ್ಯಕ್ತಗೊಳಿಸಿ ತನ್ಮೂಲಕ ಏರ್ಪಡುವ ಅನಿಶ್ಚಲವಾದ ಪೂರ್ಣಾನಂದ ಪುರುಷಾರ್ಥವನ್ನು ತೋರಿಸುವುದೇ ಆಗಿದೆ. ಈ ವಿವರಣೆಯನ್ನು ಒಳಗೊಂಡ ಶಾಸ್ತ್ರಕ್ಕೆ ತತ್ತ್ವನಿವೇದನ ಪ್ರಕರಣದಲ್ಲಿ ಅರ್ಥಪಂಚಕವೆಂದೂ ನಿಷ್ಕರ್ಷೆ ಏರ್ಪಟ್ಟಿದೆ. ಈ ನಿಷ್ಕರ್ಷೆಯು ತತ್ತ್ವ ಪ್ರಕಾಶಕವಾದ ತತ್ತ್ವಸಹಜವಾದ ತತ್ತ್ವಾನುಗುಣವಾದ ‘ವೇದ’ ಎಂಬ ಸಾಧನದ ಮೂಲಕವಾಗಿಯೇ ಪಡೆಯಬಹುದು. ಆದುದರಿಂದ ಪ್ರಮಾಣದಲ್ಲಿ ಹಿರಿಮೆಯನ್ನು ಹೊತ್ತ ವೇದದಂತೆಯೇ ಪದಾರ್ಥಗಳಲ್ಲಿ ಅತ್ಯಂತ ಹಿರಿಮೆ ಹೊಂದಿದ ವಸ್ತು “ತತ್” “ಯತ್” ಎನ್ನಲಾದ ಬ್ರಹ್ಮವಸ್ತು. “ಅಯರ್ವರಂ ಅಮರರ್‌ಹಳ್ ಅಧಿಪತಿ” ಎಂಬ ವಾಕ್ಯದಲ್ಲಿ ನಿತ್ಯಾಸಂಕುಚಿತ ಜ್ಞಾನಿಗಳಾದವರಿಗೂ ಸ್ವಯತ್ನದಿಂದ ಗ್ರಹಿಸಲಾರದ ಶಾಸಕವಸ್ತು ಎಂದು ಭಾಸವಾಗುತ್ತದೆ.

ಕೊನೆಯದಾಗಿ “ತತ್ತು ಸಮನ್ವಯಾತ್” ಎಂಬ ಸೂತ್ರದಿಂದ ಎಲ್ಲ ವಸ್ತುಗಳಿಗೂ ಪರಬ್ರಹ್ಮವೇ ಗುರಿ ಎಂದು ತಿಳಿಸಿ ಪರಸ್ಪರ ವಸ್ತುಗಳಿಗೆ ಸ್ವತಂತ್ರವಾದ ಉಳಿವು, ಸಂಬಂಧ, ಸಾಧನ ಸಂಪತ್ತಿ ಮತ್ತು ಮನೋರಥ ಸಿದ್ಧಿ ಆಗಲಾರದೆಂದು ವ್ಯಕ್ತವಾಗುತ್ತದೆ. ಅಂತೆಯೇ “ತುಯರಡು ಕುಡರಡಿ ಎನ್ಮನನೇ” ಎಂಬ ತುರೀಯ ವಾಕ್ಯದಲ್ಲಿ ಇದೇ ಅರ್ಥ ಸಮರ್ಥಿತವಾಗಿದೆ. ದುಃಖನಿವಾರಣೆಗೆ ಶಕ್ತವಾದ “ಶುಡರಡಿ” ಶ್ರೀಮತ್ಪಾದ ದಿವ್ಯಮೂಲವನ್ನು ಆಶ್ರಯಿಸಿದರೆ ಮಾತ್ರ ಉಜ್ಜೀವನ ಸಾಧ್ಯವೆಂದು ನಿಶ್ಚಯಿಸಿ ಆ ಮಾರ್ಗವನ್ನು ಮನಸ್ಸು ಅನುಸರಿಸ ಬೇಕೆಂದು ತಾತ್ತ್ವಿಕ ಕ್ರಮ ತೋರಿಸಲಾಗಿದೆ. ಆದ್ದರಿಂದ ತಿರುವಾಯ್‌ಮೊಳಿಯ ಮೊದಲನೆಯ ಪದ್ಯ ಶಾರೀರಕ ಮೀಮಾಂಸೆಯ ಚತುಃಸೂತ್ರಿಯ ಕ್ರಮಕ್ಕೆ ಬದ್ಧವಾಗಿದೆ ಎಂಬುದು ಸುವ್ಯಕ್ತ. “ಬ್ರಹ್ಮ” ಶಬ್ದ ಸೂತ್ರದಲ್ಲಿ ಕಂಡು ಬಂದಂತೆ ‘ಅಧಿಪತಿ’ ಶಬ್ದ ಪ್ರಬಂಧದಲ್ಲಿ ಕಂಡು ಬರುತ್ತದೆ. ಸರ್ವಥಾ “ಬ್ರಹ್ಮ” ಪದವಾಚ್ಯವಸ್ತು. ಅದೇರೀತಿಯಲ್ಲಿ “ಅಧಿಪತಿ” ಶಬ್ದಕ್ಕೆ ವಾಚ್ಯವಾಗುತ್ತದೆ. ಆದ್ದರಿಂದ “ಬ್ರಹ್ಮ” “ಅಧಿಪತಿ” ಸಮನ್ವಯ ಹೊಂದುವುದು.

ಶ್ರೀ ಎಂ. ಶ್ರೀನಿವಾಸೈಂಗಾರ್

ಶಾಸ್ತ್ರ, ಅಧಿಪತ್ಯ, ಬ್ರಹ್ಮ, ನಲಮುಡೈಯವನ್, ಅಧಿಕಾರಿ ನಿತ್ಯ ನಿರವದ್ಯ ನಿರತಿಶಯ ಆನಂದಫಲವನ್ನು ಬಯಸುವವನು. “ಮನನ್” ಪರಿಪೂರ್ಣ ಶಾಂತಿಯನ್ನು ಹೊಂದಲು ಉಜ್ಜೀವನವನ್ನು ಕೋರುವ ಮನಸ್ಸು. ಕಾರಣತ್ವ ರಕ್ಷಕತ್ವ ಇವೆರಡೂ ಪರಬ್ರಹ್ಮವಸ್ತುವಿಗೆ ಛತ್ರಚಾಮರದಂತೆ, ಇರುವ ಕುರುಹುಗಳೆಂದು ರಾಮಾನುಜಾಚಾರ್ಯರ ವೇದಲಬ್ಧವಾದ ಅಭಿಪ್ರಾಯ. ಕಾರಣತ್ವ ಪರತ್ವ ನಿಬಂಧನ, ರಕ್ಷಕತ್ವ ಸೌಲಭ್ಯ ಪ್ರಕಾಶಕ. ಚೇತನನು ತನ್ನ ಏಳಿಗೆಗಾಗಿ ಸ್ವತಃ ಏನನ್ನೂ ಮಾಡಲಾರನು. ಪರಬ್ರಹ್ಮನು ರಕ್ಷಣೆಗೆ ಏನನ್ನೂ ಬಯಸುವಂತಲ್ಲದ ಸಮೃದ್ಧನು. ‘ಶೈಯ್ಯಲಾವದಿಲ್ಲೈ ಶೈಯ್ಯವೇಂಡುವದಿಲ್ಲೈ’ ಎಂಬುದಾಗಿ ಪುರಾತನ ತತ್ತ್ವವಿತ್ತುಗಳ ನಿಲವು. ಹಾಗಾದರೆ ಜೀವ ಪರರಿಬ್ಬರೂ ಒಂದಾಗುವ ಬಗೆ ಹೇಗೆ? ಜೀವನ ವೈಷಮ್ಯಕ್ಕೆ ಅವನ ಕರ್ಮವೇ ಕಾರಣ, ಅದೂ ಅನಾದಿ ಎಂದ ಮೇಲೆ ಕರ್ಮಾಧೀನನಾದ ಜೀವನು ಕರ್ಮಾನಪೇಕ್ಷನಾದ ಈಶ್ವರನು ಪರಸ್ಪರ ಸಹಾಯದಿಂದ ಕರ್ಮ ವಿನಾಶಕ್ಕೆ ಭಾಗಿಗಳಾಗುವುದು ಹೇಗೆ?

ಕಲಿವೈರಿದಾಸರೆಂಬ ದಿವ್ಯಸೂರಿ ವಂಶ್ಯರಾದವರು ತಮ್ಮ “ಈಡು” ಎಂಬ ವ್ಯಾಖ್ಯಾನದ ಅವತಾರಿಕೆಯ ಮಣಿಪ್ರವಾಳ ನುಡಿಯಲ್ಲಿ ವೇದಾರ್ಥದ ತಾತ್ಪರ್ಯವನ್ನು ಅತಿಸರಳ ಗಂಭೀರ ರೀತಿಯಲ್ಲಿ ಸಂಗ್ರಹಿಸಿದ್ದಾರೆ. “ಶ್ರೀಯಃಪತಿಯಾಯ್ ಅವಾಪ್ತ ಸಮಸ್ತ ಕಾಮನಾಯ್ ಸಮಸ್ತ ಕಲ್ಯಾಣ ಗುಣಾತ್ಮಕನಾನ ಸರ್ವೇಶ್ವರನ್” ಎಂಬುದಾಗಿ ಪರತತ್ತ್ವದ ಸ್ವರೂಪವನ್ನು ರಕ್ಷಕತ್ವ ಸೂಚಕವಾದ ಅತಿಶಯವನ್ನು ಒಂದನ್ನೂ ಬಿಡದೆ ವಿವರಿಸಿದ್ದಾರೆ. ಆರೋಹಣ ಕ್ರಮದಲ್ಲಿ ಪರತ್ತ್ವ ಪ್ರತಿಪಾದನೆ, ಅವರೋಹಣ ಕ್ರಮದಲ್ಲಿ ರಕ್ಷಕತ್ವ ಸ್ಪಷ್ಟೀಕರಣ. ಆರೋಹಣ ಕ್ರಮವನ್ನು ಶ್ರೀಭಾಷ್ಯದಲ್ಲಿ ಕಾಣಬಹುದು. ಅದರಲ್ಲಿ ಕಂಡ ರಕ್ಷಣ ವಿಧಾನ ನಿಜತ್ವವನ್ನು (ಭಗವದ್ವಿಷಯವನ್ನು) ಈಡಿನಲ್ಲಿ ಕಾಣಬಹುದು. ಆದ್ದರಿಂದ ಭಗವದಾಸಕ್ತಿ ಈಶ್ವರನಿಷ್ಠವಾದ ಚೇತನಾಸಕ್ತ ವಾಂಛೆಯ ಚಿಗುರು ಎಂದು ಸುಸ್ಪಷ್ಟವಾಗುತ್ತದೆ. ಆದ್ದರಿಂದ ಚೇತನಕೃತಭಕ್ತಿ ಈಶ್ವರ ಕೃತವಾದ ಪರಭಕ್ತ್ಯಾದಿಗಳೆನಲಾದ ಹಿನ್ನೆಲೆಯಲ್ಲಿ ಮಾತ್ರ ಸಾಧ್ಯ ಎಂದು ನಿಷ್ಕರ್ಷಿಸಬಹುದಾಗಿದೆ. ಆದ್ದರಿಂದ ‘ತಿರುವಾಯ್‌ಮೊಳಿಯ’ ಪರಿಚಯದಿಂದ ಸಮಸ್ತ ಯತ

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ. ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

ಫಲಿತಗಳಿಗೂ ಈಶ್ವರನ ಕೃಪಾಮೂಲಕವಾದ ಕಟಾಕ್ಷವೆಂಬ ಸಂಕಲ್ಪವೇ ಕಾರಣ ಎರ್ಪಡುವುದರಿಂದ ತಿರುವಾಯ್‌ಮೊಳಿ ಎಂಬ ಸಾಗರದಲ್ಲಿ ಒಂದಂಶವನ್ನೂ ತೋರಿಸಬಲ್ಲವು. "ಶಾರೀರಕ ಮೀಮಾಂಸೆ" ಎಂಬ ತಾತ್ಪರ್ಯವನ್ನು ಶ್ರೀ ಭಾಷ್ಯದಲ್ಲಿ ಶರೀರಶ್ರೀನ ಮತ್ತು ತತಂಬಂಧಿ ಎಂಬ ಎರಡು ಪದಗಳಿಂದ, ಅಂತೆಯೇ ಆತ್ತದೇಕಾಲಂಬನಿಷ್ಠರಾದ ಮುಮುಕ್ಷುಗಳಲ್ಲಿ ಬ್ರಹ್ಮನನ್ನು ವಿಶೇಷ್ಯವಾಗಿ ಮತ್ತು ವಿಶೇಷಣವಾಗಿ ಹೀಗೆ ಎರಡು ರೀತಿಯಲ್ಲಿ ಉಪಯೋಗಿಸಿಕೊಳ್ಳುವುದು ತೋರಿಬಂದಿರುವುದರಿಂದ, ವಿಷಯ ದೃಷ್ಟಿಯಿಂದ ಫಲದಲ್ಲಿ ವೈಷಮ್ಯಕ್ಕೆ ಅವಕಾಶವಿಲ್ಲದುದರಿಂದ, ಸ್ವೀಕಾರದಲ್ಲಿ ಭಾವಭೇದ ಇರುವುದರಿಂದ "ಈಡು" ನಿಷ್ಠರು ತಮ್ಮನ್ನು ದಾಸ್ಯವರ್ಗದಲ್ಲಿ ಉಳಿಸಿಕೊಳ್ಳುವುದರಿಂದ, "ತಿರುವಾಯ್‌ಮೊಳಿ" ವ್ಯಾಪಕವಾದ ಜೀವಸ್ವರೂಪವನ್ನು ಉಳಿಸಿ ಕೊಳ್ಳುತ್ತದೆ ಬ್ರಹ್ಮಸೂತ್ರದಲ್ಲಿ ತನಗೆ ಸಲ್ಲದ ಅವಿನಾಶ್ಯವಾದ ಮತ್ತು ಅನಾರೋಪಿತವಲ್ಲದ ಸ್ವಭಾವವನ್ನು ಅಂದರೆ ಜ್ಞಾನದ್ರವ್ಯಕ್ಕೂ ಜ್ಞಾನಧರ್ಮಕ್ಕೂ ಇರುವ ಸ್ವಸ್ವಾಮಿ ಸಂಬಂಧ, ಈಶ್ವರ ಸಂಕಲ್ಪ ನಿರಪೇಕ್ಷ ಎಂಬ ಅಭಿಪ್ರಾಯವನ್ನು ಉಳಿಸಿಕೊಳ್ಳುವುದರಿಂದ, ಪೃಥಕ್ಕರಣ ಸ್ವಭಾವ ಪ್ರಕಟವಾಗಿ, ಅದು ಸಾಮಾನಾಧಿಕರಣ ಸ್ವಭಾವಕ್ಕೆ ಪೂರ್ಣವಾಗಿ ಹೊಂದಿಕೊಳ್ಳಲಾರದು ಎಂಬ ಈ ಭೇದವನ್ನು ಯಾವರೀತಿಯಲ್ಲಿಯೂ ಅಳಿಸಲಾಗುವುದಿಲ್ಲ. ಉಭಯ ವೇದಾಂತವೆಂದರೆ ಜೀವನು ಸ್ವತಂತ್ರನಲ್ಲ ಪರತಂತ್ರ ಎಂಬುದು. "ಅಪೃಥಕ್‌ಸಿದ್ಧ" ವಿಶೇಷಣ ಜೀವಸ್ವಭಾವವೆಂದೂ, ಜೀವ ಸಂರಕ್ಷಣೆ ವಿಶೇಷ್ಯವಾದ ಪರಮಾತ್ಮನ ಸ್ವಾಭಾವಿಕ ಸ್ವಯಂಪ್ರೇರಿತ ಧರ್ಮವೆಂದೂ ಸುಲಭವಾಗಿ ತಿಳಿಯಬಹುದು. ಪರತ್ವ ಸಂಬಂಧವಾದ ಪ್ರಭಾವ ಶಾರೀರಕ ಮೀಮಾಂಸೆಯಲ್ಲಿ ಸೌಲಭ್ಯ ಪೋಷಿತವಾದ ಪರಿಪಾಲನೆಯು ತಿರುವಾಯ್ ಮೊಳಿಯಲ್ಲಿ ಪ್ರಧಾನವಾಗಿ ಹೇಳಲಾಗಿದೆ. 'ಪರತ್ವ'–ಶಾರೀರಕ ಮೀಮಾಂಸೆ "ಸೌಲಭ್ಯ" – ತಿರುವಾಯ್‌ಮೊಳಿ. ಇವೆರಡೂ ಸೇರಿದರೆ "ಉಭಯವೇದಾಂತ – ಇತಿ ಶಾಸ್ತ್ರೈಕಸಿದಿಃ"

ಕೂರೇಶರು ಆರೋಹಣ ಅವರೋಹಣ ಕ್ರಮಗಳನ್ನು ತಮ್ಮ ಗುರು ಪರಂಪರೆಯಲ್ಲಿ ವ್ಯಕ್ತಪಡಿಸಿದ್ದಾರೆ. ಆರೋಹಣ ಕ್ರಮವನ್ನು ಪ್ರತಿಪಾದಿಸುವ ಶ್ಲೋಕ ಪ್ರಾದೇಶಿಕವಾಗಿದೆ. ಅಂದರೆ ಎಲ್ಲಾ ದಿವ್ಯದೇಶಗಳಲ್ಲಿಯೂ ನಿಯತವಾಗಿ ಅನುಸಂಧಾನದಲ್ಲಿ ಅನ್ವಯಪಡೆದಿಲ್ಲ. ಆ ಶ್ಲೋಕ "ಅಸ್ಮದ್ಗುರು ಸಮಾರಂಭಾಂ ಯತಿಶೇಖರ ಮಧ್ಯಮಾಂ ಲಕ್ಷ್ಮೀವಲ್ಲಭ ಪರ್ಯಂತಾಂ ವಂದೇ ಗುರು ಪರಂಪರಾಂ". ಇದರಲ್ಲಿ ಕೂರೇಶರು ಸಾಕ್ಷಾತ್ ಆಚಾರ್ಯರನ್ನು ಮೊದಲು ಮಾಡಿಕೊಂಡು ಅವರಿಗೂ ಆಚಾರ್ಯರು ಇರುವರೆಂದು, ಆಚಾರ್ಯರಿಗೆ ಪರಮಾಚಾರ್ಯರಿರುವರೆಂದೂ ತೋರಿಸಿ ಆ ಪರಮಾಚಾರ್ಯರಿಗೆ ಮತ್ತೊಬ್ಬರಿಲ್ಲವೆಂದು ಗೊತ್ತಾಗುತ್ತದೆ. ತೈತ್ತಿರೀಯದ ಬ್ರಹ್ಮೋಪಾಸನೆಯ ವಿಧಾನದಲ್ಲಿ ಅನ್ನ, ಪ್ರಾಣ, ಮನಸ್ಸು, ವಿಜ್ಞಾನಗಳು ಒಂದಕೊಂದು ಉತ್ತಮವಾದರೂ ಎಲ್ಲಕ್ಕಿಂತ ಮಿಗಿಲಾಗಿ ಆನಂದವು ತತ್ತ್ವದ ಪರಾಕಾಷ್ಠೆ ಎಂದು ಹೇಳುವ ರೀತಿಯಲ್ಲಿ, ಆಚಾರ್ಯರಲ್ಲಿ ಅಂತಿಮ ಪಂಕ್ತಿಯಲ್ಲಿ ಉನ್ನತತಮವಾದ ತತ್ತ್ವ ಲಕ್ಷ್ಮೀ ವಲ್ಲಭನೆಂಬುದು ತೋರಿಬರುವುದರಿಂದ, ಆದರ ಸಂಕಲ್ಪ ವಶದಿಂದ, ಪ್ರಭಾವದ ಫಲವಾಗಿ, ಇತರ ಆಚಾರ್ಯರು ಸಾಲಾಗಿ ನಿಂತು ಜ್ಞಾನದೀಪಿಗೆಯನ್ನು ಬೆಳೆಸುತ್ತಾರಲ್ಲದೆ, ಜ್ಞೇಯವಾದ ಪರಬ್ರಹ್ಮನು ತಾನೇ ಎಂದು ಪರಿಗಣಿಸಲಾಗುವುದಿಲ್ಲ. ಇದು ಅವರೋಹಣ ಕ್ರಮ ಪರದೇವತೆಯನ್ನು ತೋರಿಸಿ ಕೊಳ್ಳ ಬಲ್ಲವನಾದುದರಿಂದ ಅವರಿಗೆ ಪರಮೇಶ್ವರನಿಗೆ ಸಲ್ಲುವ ಗೌರವವು ಸಲ್ಲುತ್ತದೆ. ಇದು ಆರ್ಷ್ಯಕ್ರಮ–ಅಂದರೆ ಆಚಾರ್ಯರುಗಳು ತಮ್ಮ ಯೋಗದಿಂದ ಸಾಕ್ಷಾತ್ಕಾರವನ್ನು ಸಾಧಿಸಿಕೊಂಡು ತಪೋನಿಷ್ಠರಾಗಿ ಎಲ್ಲೂ ಇರುವರೆಂದೂ ಕ್ಷೀಣಪಾಪರೆಂದೂ ಪುಣ್ಯ ಸಂಚಯ ಪಡೆದವರೆಂದೂ, ಸಾತ್ತ್ವಿಕರೆಂದೂ, ಸ್ಥಿತಪ್ರಜ್ಞರೆಂದೂ ಹೇಳಿಸಿಕೊಳ್ಳುತ್ತಾರೆ. ಇವರ ಮೂಲಕ ಪರಮಾಚಾರ್ಯರ, ಪರದೇವತೆಯೂ ಆದ ತತ್ತ್ವಸಾಕ್ಷಾತ್ಕಾರ ಲಭ್ಯವಾಗುತ್ತದೆ. ಸಾಕ್ಷಾತ್ಕಾರದ ಅನಂತರ ಇವರ ಅವಶ್ಯಕತೆ ತೋರುವುದಿಲ್ಲ. ಆದರೂ ಕೃತಜ್ಞತಾಸೂಚಕವಾಗಿ ಅವರನ್ನು ಮರೆಯುವಂತಿಲ್ಲ.

"ಶ್ರಿಯಃಪತಿಯಾಯ್" ಎಂಬ ಮೊದಲನೆಯದು "ಏವ" ಸರ್ವೇಶ್ವರತ್ವಕ್ಕೆ ಪ್ರಥಮ ಸೂಚಕವಾಗಿರುವುದರಿಂದ ಶ್ರೀವಿಶಿಷ್ಟನಾದ ವಿಷ್ಣುವಿಗೆ ನಿರೂಪಕಧರ್ಮವಾಗುತ್ತದೆ. ನಿರೂಪಕ ಎಂದರೆ ವಿಶೇಷಣದ ಅಭಾವದಲ್ಲಿ ವಿಶೇಷ್ಯವು ತೋರುವುದೇ ಇಲ್ಲ. ಆದುದರಿಂದ ವಿಷ್ಣುವನ್ನು ಗುರುತಿಸಬೇಕಾದರೆ ಶ್ರೀದೇವಿ ಅತ್ಯಾವಶ್ಯಕ ಮತ್ತು ಇವಳಿಗೆ ಪತಿಯಾಗಿರುವಿಕೆ ವಿಷ್ಣುವಿನ ನಿಜಸ್ವರೂಪ ಪಾರಮ್ಯದ್ಯೋತಕವಾದ ಅವಸ್ಥೆ. ಆದುದರಿಂದ ವಿಷ್ಣುವಿಗೆ ಮುಖ್ಯತಮವಾದ ವಿಶೇಷಣ ಶ್ರೀದೇವಿ ಈ ಭಾವನೆಯ ಪರಿಣಾಮವಾಗಿ ವಿಶಿಷ್ಟಾದ್ವೈತದಲ್ಲಿ ಸಹ ಪರಿವರ್ತನೆಯಾದ ಶ್ರೀದೇವಿಗೆ ವಿಶೇಷ್ಯ, ಅನುವರ್ತನೆಯ (ಬಲುವಾಗಿ) ಫಲವಾಗಿ ಸ್ವರೂಪ ವಿಭುತ್ವವನ್ನು ನಿರ್ದೇಶಿಸುತ್ತಾರೆ. ಶ್ರೀದೇವಿ

(25ನೇ ಪುಟ ನೋಡಿ)

# ತುಲಸೀದಾಸರು

ಆತ್ಮೋದ್ಧಾರಕ್ಕೆ ಅನೇಕ ಸಾಧನಗಳಿದ್ದರೂ ತುಲಸೀದಾಸರಿಗೆ ಭಕ್ತಿಮಾರ್ಗ ಹಿತವಾಗಿ ಕಂಡು ಬಂತು. ಅವರು ತಮ್ಮ ಬಾಳೆಂಬ ಬಳ್ಳಿಯನ್ನು ರಾಮಭಕ್ತಿಯೆಂಬ ಸುಭದ್ರ ಚಪ್ಪರಕ್ಕೆ ಹಬ್ಬಿಸಿಬಿಟ್ಟರು. ಆ ಲತಾಕುಂಜದಲ್ಲಿ ಶ್ರೀರಾಮಚಂದ್ರನನ್ನು ಪ್ರತಿಷ್ಠಿಸಿದರು. ಆತನ ರೂಪಸೌಂದರ್ಯವನ್ನು ನೋಡಿ ನಲಿದರು; ಗುಣಗಾನ ಮಾಡಿ ಹಿಗ್ಗಿದರು. ಸಾಧುಸಂತರು ಸಂಚರಿಸುವ ಕಲ್ಪವೃಕ್ಷಗಳಂತೆ–ಎಂದು ಹಿರಿಯರಾಡುವ ಮಾತು ಗೋಸ್ವಾಮಿ ತುಲಸೀದಾಸರಿಗೆ ಅಕ್ಷರಶಃ ಅನ್ವಯಿಸುತ್ತದೆ. ದ್ವಾಪರಯುಗದಲ್ಲಿ ಮೃತ್ಯುಭೀತ ಪರೀಕ್ಷಿತನಿಗೆ ಶುಕಮಹರ್ಷಿ ಭಾಗವತ ಹೇಳಿ ಬಾಳಿಗೊಂದು ನಂಬಿಕೆ ಕೊಟ್ಟಂತೆ, ಕಲಿಯುಗದ ಪಥಭ್ರಷ್ಟ ಜನಕ್ಕೆ–ಮಾರ್ಗದರ್ಶನ ಮಾಡಿಸಿರುವ ಈ ಸಂತಕವಿ ಜೀವನವನ್ನು ಪಾವನಗೊಳಿಸುವ ಸುಲಭೋಪಾಯ ಸೂಚಿಸಿದ್ದಾರೆ.

ಸಕೃದೇವ ಪ್ರಪನ್ನಾಯ
ತವಾಸ್ಮೀತಿ ಚ ಯಾಚತೇ
ಅಭಯಂ ಸರ್ವ ಭೂತೇಭ್ಯೋ
ದದಾಮ್ಯೇತದ್ವ್ರತಂ ಮಮ

ಎಂದು ಹೇಳಿದ ಪ್ರಭು ರಾಮಚಂದ್ರನ ಮಾತನ್ನು ಮರೆತು ಹೋದ ಜನಕ್ಕೆ ತುಲಸೀದಾಸರು ಭಗವತ್ಕಾರುಣ್ಯವನ್ನು ನೆನಪು ಮಾಡಿಕೊಡಲು ಬಂದವರು. ಜಗತ್ತಿನ ಯಾವ ಮಹಾಕವಿಯೇ ಆದರೂ–ವಸ್ತುತಃ ಆತ ಯಾರು? ಪರಮಾತ್ಮನು ತನ್ನ ಸಂಕಲ್ಪ ಸಾಧನೆಗಾಗಿ ಬಳಸಿಕೊಳ್ಳುವ – ಆರಿಸಿಕೊಳ್ಳುವ ಸಾಧನ – ಉಪಕರಣ – ಅಷ್ಟೆ, ತುಲಸೀದಾಸರ ಸಮಗ್ರ ಜೀವನವನ್ನು ಸಂಪೂರ್ಣ ವ್ಯಕ್ತಿತ್ವವನ್ನು ಕ್ರೋಢೀಕರಿಸಿ ಹೇಳ ಬೇಕಾದರೆ, ಅವರದೇ ಒಂದು ದ್ವಿಪದಿ ಹೇಳಿದರಾಯ್ತು.

ಏಕ ಭರೋಸೋ ಏಕ ಬಲ
ಏಕ ಆಸ ಬಿಸ್ವಾಸ್
ಏಕರಾಮ ಘನಶ್ಯಾಮ
ಹಿತ ಚಾತಕ ತುಲಸೀದಾಸ್

ಬಾಳಿನಲ್ಲಿ ಒಂದೇ ಭರವಸೆ–ರಾಮ. ಒಂದೇ ಬಲ–ರಾಮ. ಒಂದೇ ಆಸೆ ರಾಮದರ್ಶನ, ಒಂದೇ ನಂಬಿಕೆ– ರಾಮ ಕಾಪಾಡುತ್ತಾನೆ. ನೀಲಮೇಘಶ್ಯಾಮನಾದ ರಾಮನ ದರ್ಶನಕ್ಕಾಗಿ ಹಾತೊರೆದು ಕಾತರಿಸುವ ಚಾತಕ ಪಕ್ಷಿ ಈ ತುಲಸೀದಾಸ, ಈತ ನಿಜಕ್ಕೂ ಪ್ರಭು ರಾಮಚಂದ್ರನ ಪಾದಕ್ಕೆ ಅರ್ಪಿತವಾದ ಒಂದು ಪಾವನ ತುಲಸೀದಳ.

ಕನ್ನಡಿಗರಾದ ಪುರಂದರದಾಸರು, ಹಿಂದಿಯವರಾದ ತುಲಸೀದಾಸರು–ಇಬ್ಬರ ಬಾಳನ್ನೂ – ಸಾಹಿತ್ಯವನ್ನೂ – ಹೋಲಿಕೆ ಹಾಕಿ ನೋಡಿದಾಗ ವೈಷಮ್ಯಕ್ಕಿಂತಲೂ ಸಾಮ್ಯವೇ ಹೆಚ್ಚು ಪ್ರಮಾಣದಲ್ಲಿದೆಯೆಂದು ಕಾಣುತ್ತದೆ. ಇಬ್ಬರ ಬರವಣಿಗೆಯಲ್ಲೂ–ಬಾಳಿನಲ್ಲೂ ಜ್ಞಾನ ಭಕ್ತಿ ವೈರಾಗ್ಯಗಳು ಒಂದೇ ಸಮನೆ ಕಾಣುತ್ತವೆ. ಒಂದು ಕಡೆ ರಾಮಭಕ್ತಿ–ಒಂದು ಕಡೆ ಕೃಷ್ಣಭಕ್ತಿ ಒಂದು ಕಡೆ ಕನ್ನಡ–ಒಂದು ಕಡೆ ಹಿಂದಿ–ಇಷ್ಟೇ ವ್ಯತ್ಯಾಸ, ಭಾಷೆ ಬೇರೆಯಾದರೇನು! ಭಾವವೊಂದೆ.

ರಾಮ ಎಂಬುವ ಎರಡಕ್ಷರದ ಮಹಿಮೆಯನು ಪಾಮರರು ತಾವೇನು ಬಲ್ಲರಯ್ಯ!! ರಾ ಎಂದ ಮಾತ್ರದಲಿ ರಕ್ತ ಮಾಂಸದೊಳಿದ್ದ ಆ ಅಸ್ಥಿಗತವಾದ ಪಾಪವನ್ನು ಮಾಯವನು ಮಾಡಿ ಮಹರಾಯ ಮುಕ್ತಿಯ ಕೊಡುವ ದಾಯವನು ವಾಲ್ಮೀಕಿಮುನಿ ತಾನು ಬಲ್ಲ!! ಮತ್ತೆ ಮ ಎಂದೆನಲು ಹೊರ ಬಿದ್ದ ಪಾಪಗಳು ಒತ್ತಿ ಒಳಪೋಗದಂತೆ ಕವಾಟವಾಗಿ ಚಿತ್ತಕಾಯಗಳ ಪವಿತ್ರ ಮಾಡುವ ಪರಿಯ ಭಕ್ತವರ ಪವಮಾನ ಸುತನೊಬ್ಬ ಬಲ್ಲ!! ಧರೆಯೊಳೀನಾಮಕ್ಕೆ ಸರಿಮಿಗಿಲು ಇಲ್ಲೆಂದು ಪರಮ ವೇದಗಳೆಲ್ಲ ಸಾರುತಿರಲು ಸಿರಿಯರಸ ಪುರಂದರ ವಿಠಲನ ಮಹಿಮೆಯನು ಸಿರಿಕಾಶಿಯೊಳಗಿರುವ ಶಿವನು ತಾ ಬಲ್ಲ!!

–ಎಂದು ತಮ್ಮ ಅಭಿಪ್ರಾಯವನ್ನು ಸೂಚಿಸಿರುವ ಪುರಂದರದಾಸರು ರಾಮನಾಮದ ಮಹತ್ತ್ವವನ್ನು ಬಲ್ಲ ಮೂರುಜನ ಮಹನೀಯರನ್ನು ಪಂಗಡಿಸಿದ್ದಾರೆ. ಈ ಪಟ್ಟಿಗೆ ಸೇರಲು ಅರ್ಹರಾದ ಇನ್ನೊಬ್ಬವ್ಯಕ್ತಿಯೆಂದರೆ ತುಲಸೀದಾಸ; ಮತ್ತೊಬ್ಬವ್ಯಕ್ತಿಯೆಂದರೆ ಸ್ವಯಂ ಪುರಂದರದಾಸರೆ, ಆದರೆ ಅವರಿದಕ್ಕೆ ಒಪ್ಪುವುದಿಲ್ಲ–ಅಷ್ಟೆ!!

ನರಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣ ಎನಬಾರದೆ? ಎಂಬ ದಾಸವರ್ಯರ ಒಂದು ಕವಿತೆಯಲ್ಲಿ–ಕೃಷ್ಣ – ಎಂಬ ಪದಕ್ಕೆ ಬದಲಾಗಿ-ರಾಮ–ಎಂಬ ಪದವನ್ನು ಜೋಡಿಸಿದರೆ–ಪದ್ಯವೂ ಕೆಡುವುದಿಲ್ಲ ಅರ್ಥವೂ ಕೆಡುವುದಿಲ್ಲ. ಪುರಂದರದಾಸರು ಅಸಮಾಧಾನ ಪಡುವುದೂ ಇಲ್ಲ!! ತೂ ದಯಾಲ ನಿರ್ಮಲ ಚಿತ್–ಎಂಬ ತುಲಸೀದಾಸರ ಕವಿತೆಯನ್ನು ಪುರಂದರದಾಸರ–ನೀನೇದಯಾಳು ನಿರ್ಮಲ ಚಿತ್ತಗೋವಿಂದ – ಎಂಬ ಕವಿತೆಗೆ ಹೋಲಿಸಿ ನೋಡಿದಾಗ ಯಾವ ಬಗೆಯ ವ್ಯತ್ಯಾಸವೂ ಕಾಣುವುದಿಲ್ಲ. ಪುರಂದರದಾಸರ ಕೃಷ್ಣ, ತುಲಸೀದಾಸರ ರಾಮ–ಒಂದೇ ನಾಣ್ಯದ ಎರಡು ಮುಖಗಳು. ಕೊಳಲು ಹಿಡಿದು ಕೃಷ್ಣನಾದ-ಕೋದಂಡಧಾರಿಯಾಗಿ ರಾಮನಾದ. ಒಬ್ಬ ಸರಯೂ ತೀರವಿಹಾರಿ, ಒಬ್ಬ ಯಮುನಾ ತೀರವಿಹಾರಿ. ಇಬ್ಬರೂ ಲಾವಣ್ಯ ಮೂರ್ತಿಗಳೇ–ಇಬ್ಬರೂ ಲೋಕಪೂಜ್ಯರೆ. ಇವರಿಬ್ಬರನ್ನು ಕುರಿತು ಬರೆದ ಪುರಂದರದಾಸ – ತುಲಸೀದಾಸ ಇಬ್ಬರೂ ಜಗನ್ಮಾನ್ಯ ಕವಿ ಪುಂಗವರೆ.

ಸರ್ವತಃಪಾಣಿ ಪಾದಂ ತತ್
ಸರ್ವತೋಕ್ಷಿ ಶಿರೋಮುಖಂ
ಜ್ಯೋತಿಷಾಮಪಿ ತಜ್ಜ್ಯೋತಿಃ
ತಮಸಃ ಪರಂ ಜ್ಞಾನಗಮ್ಯಂ
ಭಾವಾತೀತಂ............

**ವಿದ್ವಾನ್ ಬ. ನ. ಗುಂಡೂರಾವ್**

ಇತ್ಯಾದಿಮಾತುಗಳು ಪರಮಾತ್ಮನ ಸ್ವರೂಪವನ್ನು ವಿವರಿಸುತ್ತವೆ – ತಮ್ಮದೇ ಆದ ವೇದಾಂತದ ಧಾಟಿಯಲ್ಲಿ ಅದೇಸ್ವರೂಪವನ್ನು ತುಲಸೀದಾಸರು ಹೀಗೆ ಬಣ್ಣಿಸಿದ್ದಾರೆ—

ಮರಕತ ಮೃದುಲ ಕಲೇವರ ಶ್ಯಾಮ
ಅಂಗ ಅಂಗ ಪ್ರತಿ ಛವಿ ಬಹು ಕಾಮ ||
ನವರಾಜೀವ ಅರುಣ ಮೃದು ಚರನ
ಪದಜ ರುಚಿರನಖ ಸಸಿದ್ಯುತಿ ಹರನ ||
ನೂಪುರ ಚಾರು ಮಧುರ ರವಕಾರಿ
ಲಲಿತ ಅಂಗ ಕುಲಿಸಾದಿಕ ಚಾರಿ ||
ಅರುನ ಪಾನಿ ನಖಕರಜ ಮನೋಹರ
ಬಾಹುಬಿಸಾಲ ಬಿಭೂಷನ ಸುಂದರ ||
ಲಲಿತ ಕಪೋಲ ಮನೋಹರ ನಾಸ |
ಸಕಲ ಸುಖದ ಸಸಿಕರ ಸಮಹಾಸ ||
ನೀಲ ಕಂಜ ಲೋಚನ ಭವ ಮೋಚನ |
ಭ್ರಾಜತ ಭಾಲ ತಿಲಕ ಗೋರೋಚನ ||

ಅದೇ ಜ್ಞೇಯವಸ್ತುವನ್ನು ಪುರಂದರದಾಸರು ತಮ್ಮ ಲಲಿತ – ಸುಲಲಿತ ಕನ್ನಡ ಭಾಷೆಯಲ್ಲಿ ಮನಮೋಹಕ ರೀತಿಯಲ್ಲಿ– ಚೇತೋಹಾರಿ ಶೈಲಿಯಲ್ಲಿ ಹೀಗೆ ಬಣ್ಣಿಸಿದ್ದಾರೆ.

ವರಮಣಿ ಮಕುಟ ಮಸ್ತಕನ
ಸುರವರ ಸನಕಾದಿ ವನ್ದಿತ ಪಾದಯುಗನ
ತರುಣಿ ಲಕ್ಷ್ಮೀಮನೋಹರನ
ಪೀತಾಂಬರದುಡಿಗೆಲಿ ರಂಜಿಸುವ ವಿಗ್ರಹನ
ನೀಲ ಮೇಘ ಶ್ಯಾಮಲನ
ದೇವಲೋಲ ಮಕರ ಕುಂಡಲದವನ
ಭೂಲೋಕದೊಳು ಚೆನ್ನಿಗನ
ಶ್ರೀಕಮಲಾಯತಾಕ್ಷ ವೈಕುಂಠವಲ್ಲಭನ
ತುಂಗ ಚತುರ್ಭುಜದವನ
ಶುದ್ಧ ಮಂಗಳ ರೇಖೆಯಂಗದಲಿ ಒಪ್ಪುವನ
ಶೃಂಗಾರ ಕಂಬು ಕಂಧರನ
ಕಲಿತ ಕುಂಡಲ ಕರ್ಣ ಸುಲತಾಭ್ರೂಯುಗಳನ
ಕಿರುಗೆಜ್ಜೆ ಕಡಗ ನೂಪುರ ಪೆಂಡೆ ಇಟ್ಟವನ
ಅರಳಿದ ಕೆಂದಾವರೆಯ ಧಿಕ್ಕರಿಪ ರಮಣೀಯ
ಚರಣಾರವಿಂದದವನ
ಕಸ್ತೂರಿ ತಿಲಕದ ಪೊಳೆವಲಲಾಟನ
ಹಸ್ತದಿ ಕೊಳಲ ಪಿಡಿದವನ
ದೇವ ಗಂಗೆಯ ಪೆತ್ತ ಶ್ರೀ ಪುರಂದರ ವಿಠಲನ್ನ
ಕಣ್ಣಾರೆ ಕಂಡೆನಚ್ಯುತನ

ಅಗೋಚರನಾದ ಪರಮಾತ್ಮನ ವಿಷಯದಲ್ಲಿ ಬೆಳೆದದ್ದೇ ತಾನೇ ಭಾರತದ ಸಮಸ್ತ ವೇದಾಂತ ವಾಙ್ಮಯ! ಕೈಗೆಟುಕದ ವಸ್ತುವಿನ ಬಗ್ಗೆ ವಿಶೇಷ ಪ್ರಯತ್ನ. ಕೈಗೆಟುಕುವ ವಸ್ತುವಿನ ವಿಷಯದಲ್ಲಿ ವಿಶೇಷ ಆನಂದ ಒಂದು ಭಾವಗೋಚರ – ಒಂದು ನಯನಗೋಚರ. ಏಕಮಾಪಾದ ಮಧುರಂ–ಅನ್ಯದಾಲೋಚನಾಮೃತಮ್!!

ಆಲೋಚನಾಮೃತಂ–ನಿರ್ಗುಣ ಬ್ರಹ್ಮ!!
ಆಪಾದ ಮಧುರಂ–ಸಗುಣ ಬ್ರಹ್ಮ!!

ಯಾವ ಚಕ್ರವರ್ತಿ ಸಾರ್ವಭೌಮನೂ ಬೀರಲಾರದಷ್ಟು ಪರಿಣಾಮವನ್ನು ಜನತೆಯ ಮೇಲೆ ಮಹಾಕವಿಗಳು ಬೀರುತ್ತಾರೆ. ಯಾವಕಾನೂನೂ ತರಲಾರದಷ್ಟು ಭಾವೈಕ್ಯಯನ್ನು ಮಹಾಕವಿಗಳು ತರುತ್ತಾರೆ. ಮಹಾಕವಿಗಳು ಜಗತ್ತಿನಲ್ಲಿ ಅನಭಿಷಿಕ್ತ ಶಾಸಕರು– ಪ್ರಭುಗಳು. ಜನತೆಯ ಬಾಳನ್ನು ತಿದ್ದುವ ಪ್ರಯತ್ನದಲ್ಲಿ ಮಹಾಕವಿ ಸಾಧಿಸುವಷ್ಟು ಪ್ರಗತಿಯನ್ನು–ಯಾವ ಸರಕಾರವೂ ಸಾಧಿಸಲಾರದು – ಕಾನೂನೂ ಸಾಧಿಸಲಾರದು.

ಶ್ರೀರಾಮನ ಪುಣ್ಯಕಥೆಯೆಂದರೆ ಆ ಸೇತುಹಿಮಾದ್ರಿ ಪರ್ಯಂತ ಭಾರತೀಯರು ಪುಲಕಿತರಾಗುತ್ತಾರೆ. ಕೋಟಿ ಕೋಟಿ ಭಾರತೀಯರ ಹೃದಯ ವೀಣೆಯನ್ನು ನುಡಿಸಲು ರಾಮನಾಮದ ಒಂದು ಮೀಟು ಸಾಕು. ಈ ರಹಸ್ಯವನ್ನರಿತ ತುಲಸೀದಾಸರು ತಮ್ಮ ಕಾವ್ಯ ವಲ್ಲಕಿಯಲ್ಲಿ ರಾಮಕಥೆಯನ್ನು ನುಡಿಸಿದರು. ಆ ನಾದಮಾಧುರ್ಯ ಭಾರತೀಯರನ್ನು ಬೆರಗು ಗೊಳಿಸಿದ್ದೆ ಅಲ್ಲದೆ, ಅವರ ಬಾಳಿಗೊಂದು ಮೆರಗು ಕೊಟ್ಟಿತು.

(20 ನೇ ಪುಟ ನೋಡಿ)

# ಯಾತ್ರಿಕರ ಬಗ್ಗೆ ಕಾಳಜಿ ಹೊಂದಿರುವ

## ತಿ. ತಿ. ದೇವಸ್ಥಾನಗಳು

ಶ್ರೀ ವೆಂಕಟೇಶ್ವರ ಸ್ವಾಮಿಯ ಪ್ರಾಚೀನವೂ ಪವಿತ್ರವೂ ಆದ ದೇವಾಲಯವಿರುವ, ತಿರುಪತಿ ಸಮೀಪದ ತಿರುಮಲೆ ಬೆಟ್ಟಕ್ಕೆ ಬರುವ ಇಂದಿನ ಯಾತ್ರಿಕರು ಅಲ್ಲಿ ಈಚೆಗೆ ಉಂಟಾಗಿರುವ ಪರಿವರ್ತನೆಗಳ ಬಗ್ಗೆ ಬೆರಗು ಹೊಂದದಿರಲಾರರು. ಕೆಲ ದಿನಗಳ ಹಿಂದೆ ಊಹಿಸಲೂ ಆಗದಷ್ಟು ಮಟ್ಟಿಗಿನ ಸೌಲಭ್ಯಗಳನ್ನು ಈ ಪ್ರಸಿದ್ಧ ದೇವಾಲಯದಲ್ಲಿನ ಆರಾಧನಾ ವ್ಯವಸ್ಥೆಯಲ್ಲಿ ಉಂಟು ಮಾಡಲಾಗಿದೆ.

ಪ್ರತಿದಿನವೂ ಇಲ್ಲಿಗೆ ಬರುವ ಅಪಾರ ಜನ ಸಮೂಹದ ಒತ್ತಡಗಳ ನಡುವೆಯೂ–ಸಾಮಾನ್ಯ ದಿನಗಳಲ್ಲಿ 30000 ಮಂದಿ ಹಾಗೂ ಹಬ್ಬ ಹರಿದಿನಗಳಲ್ಲಿ 59000 ಮಂದಿ– ತಿರುಮಲೆ ಎಂದು ಹೆಸರಾಗಿರುವ ಈ ಪುಟ್ಟ ಪಟ್ಟಣ ಅತಿಶುಭ್ರವಾಗಿದೆ. ಯಾತ್ರಿಕರಿಗೆ ಅಗತ್ಯವಾದ ಎಲ್ಲವನ್ನೂ– ವಸತಿಯಿಂದ ಹಿಡಿದು ಆರೋಗ್ಯಕರ ಆಹಾರದವರೆಗೆ–ಅತಿ ಕಡಮೆ ವೆಚ್ಚದಲ್ಲಿ ಒದಗಿಸಲಾಗುತ್ತಿದೆ. ಏಳು ಬೆಟ್ಟಗಳ ಮೂಲಕ ಮಲೆಯಪ್ಪಸ್ವಾಮಿಯನ್ನು ಸೇರಿ ತಿರುಪತಿಗೆ ಹಿಂದಿರುಗುವ ಸಾರಿಗೆ ವ್ಯವಸ್ಥೆ ಸುಲಭ, ಸುಖಕರ ಹಾಗೂ ಶೀಘ್ರಲಭ್ಯ ಆಗಿದೆ.

1950 ರಲ್ಲಿ, ಅಷ್ಟೇಕೆ 60 ರಲ್ಲೂ ತಿರುಪತಿಗೆ ರಾತ್ರಿ ರೈಲಿನಲ್ಲಿ ಬಂದಿಳಿದು ರೈಲು ನಿಲ್ದಾಣದೆದುರಿನ ಸತ್ರದಲ್ಲಿ ದೊರಕಿದ ಸ್ಥಳದಲ್ಲಿ ಮಲಗಿದ್ದು, ಬೆಳಗಿನ ಜಾವದಲ್ಲೇ ಬೆಟ್ಟಕ್ಕೆ ಹೋಗುವ ಬಸ್ಸಿನ ಸರತಿಯಸಾಲಿನಲ್ಲಿ ಕಾಯಬೇಕಿದ್ದಿತು. ತಿರುಮಲೆಯಲ್ಲಿ ವಸತಿ ಸೌಕರ್ಯ ಸುಲಭವಾಗಿ ಯಾವಾಗಲೂ ದೊರೆಯುತ್ತದೆ ಎಂಬಂತಿರಲಿಲ್ಲ. ಯಾತ್ರಿಕರು ಮಾಡುತ್ತಿದ್ದ ಕೆಲಸವೆಂದರೆ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ, ದೇವಾಲಯದ ಹಿಂಭಾಗದಲ್ಲಿದ್ದ ಹಾವಿನಂತಹ ಸರತಿಯ ಸಾಲಿನಲ್ಲಿ ಸೇರುವಿಕೆ. ಈ ಸರತಿಯ ಸಾಲಿನಲ್ಲಿ ಎರಡು ಗಂಟೆಗೂ ಹೆಚ್ಚುಕಾಲ–ಹಬ್ಬ ಹರಿದಿನಗಳಲ್ಲಿ ಮತ್ತೂ ಹೆಚ್ಚು ಕಾಲ ಕಾದಿದ್ದು ದೇವಾಲಯದೊಳಕ್ಕೆ ಹೋಗಬೇಕಿತ್ತು. ಬೆಳಗ್ಗೆ ಹೊತ್ತಿಗೆ ಮೊದಲು ಸಾಲುಸೇರಿ ಮಧ್ಯಾಹ್ನ ಬಹಳ ಹೊತ್ತಿನ ನಂತರ ಸ್ವಾಮಿ ದರ್ಶನ ಮಾಡುತ್ತಿದ್ದುದು ಅಸಾಮಾನ್ಯವೇನಾಗಿರಲಿಲ್ಲ.

### ಸರತಿಯ ಸಾಲಿನ ಸಮುದಾಯ

ಬಹು ಈಚಿನ ಹಾಗೂ ಬಹು ಸ್ವಾಗತಾರ್ಹವಾದ ಬದಲಾವಣೆ -ಬೆಳವಣಿಗೆ ಯೆಂದರೆ, ಹಳೆಯ ಸರತಿಯಸಾಲಿನ ಷೆಡ್‌ಗಳ ಬದಲಿಗೆ ಕೆಲ ತಿಂಗಳ ಹಿಂದೆ ಆರಂಭವಾದ ಹೊಸ ಸರತಿಯ ಸಾಲಿನ ಸಮುದಾಯ. ಪ್ರತಿಯೊಂದೂ ಕನಿಷ್ಠ 500 ಮಂದಿಗೆ ಅವಕಾಶ ನೀಡುವ ಯಥೇಚ್ಛ ಗಾಳಿ ಬೆಳಕುಗಳಿಂದ ಕೂಡಿದ, ಎರಡಂತಸ್ತಿನ, 17 ವಿಭಾಗಗಳುಳ್ಳ ಅರ್ಧ ವೃತ್ತಾಕಾರದ ಈ ಸರತಿಯ ಸಾಲಿನ ಸಮುದಾಯ ಉಲ್ಲಾಸಕಾರಿಯಾದದ್ದು.

ಯಾತ್ರಿಕರುಸ್ನಾನಾನಂತರ ಸರತಿಯಸಾಲನ್ನು ಸೇರಿ ಸಾಮಾನುಗಳ ಕೋಣೆಯಲ್ಲಿ ತಮ್ಮ ವಸ್ತುಗಳನ್ನಿಟ್ಟು, ಆಗ ತುಂಬಲಾಗುತ್ತಿರುವ ಕೋಣೆಯನ್ನು ಪ್ರವೇಶಿಸಿ, ಸುವಿಶಾಲವಾದ ಬೆಂಚಿನ ಮೇಲೆ ಕೂರುತ್ತಾರೆ (ಬೆಂಚ್‌ಗಳು ಸುಲಭವಾಗಿ ತೊಳೆಯಲ್ಪಡುವ ಹೊಳೆಯುವ ಬಣ್ಣದ ಸಿಂಥೆಟಿಕ್ ವಸ್ತುಗಳಿಂದ ತಯಾರಾದದ್ದು). ಕೆಲಕಾಲ ಕಾಯಬೇಕೆಂಬುದರಲ್ಲಿ ಸಂದೇಹವಿಲ್ಲ; ಕಾರಣ ದೇವಾಲಯಕ್ಕೆ ಈ ಕೋಣೆಗಳಿಂದ ಯಾತ್ರಿಕರನ್ನು ಹಂತ ಹಂತವಾಗಿ ಕಳುಹಿಸಲಾಗುತ್ತದೆ. ಯಾವುದೇ ರೀತಿಯ ಗೊಂದಲವುಂಟಾಗದಂತೆ ಒಂದು ಕೋಣೆಯ ಜನರ ನಂತರ ಇನ್ನೊಂದು ಕೋಣೆಯ ಜನರನ್ನು ಕಳುಹಿಸಲಾಗುತ್ತದೆ.

ಪ್ರತಿಯೊಂದು ಕೋಣೆಯಲ್ಲೂ ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ ಇದ್ದು, ದೇವಾಲಯ ಕಾರ್ಯಕ್ರಮಗಳು ಪ್ರಸಾರವಾಗುತ್ತದೆ. ಜೊತೆಗೇ ಧ್ವನಿವರ್ಧಕಗಳಿಂದ ಭಕ್ತಿ ಸಂಗೀತ ವೇದ ಘೋಷದ ಪ್ರಸಾರದ ಅವಕಾಶವಿದೆ. ಇಂತಹ ಕೋಣೆಯಲ್ಲಿ ಕುಳಿತ ಯಾತ್ರಿಕರು ಪರಿಶುಭ್ರ ವಾತಾವರಣದಲ್ಲಿ ಪ್ರಾರ್ಥನೆ. ಧ್ಯಾನ ಮಾಡಲು ತಕ್ಕ ಅವಕಾಶವುಂಟಾಗುತ್ತದೆ. ಒಂದು ಗಂಟೆ ಅಥವಾ ಅದಕ್ಕೂ ಮೊದಲು ದೇವಾಲಯಕ್ಕೆ ಸ್ವಾಮಿದರ್ಶನಕ್ಕಾಗಿ ನಡೆದಾಗ ಆತನ ಮನ ತಕ್ಕ ಭಾವನೆಯಿಂದ ಕೂಡಿರಲು ಸಾಧ್ಯ. ಮೊದಲಿಗೆ ಇದ್ದಂತಹ ಅವ್ಯವಸ್ಥಿತ ಸರತಿಯ ಸಾಲಿನಲ್ಲಿ ಒಬ್ಬರು ಇನ್ನೊಬ್ಬರನ್ನು ಹಿಂದೆ ಹಾಕುವ ಪ್ರಯತ್ನಗಳ ಅನಾನುಕೂಲಗಳನ್ನು ಇಡಿಯಾಗಿ ಇಲ್ಲವಾಗಿಸಲಾಗಿದೆ.

ಈ ಕೋಣೆಗಳಲ್ಲಿ ಇನ್ನೂ ಹೆಚ್ಚಿನ ಸೌಕರ್ಯಗಳಿವೆ. ಕಾಫೀ ನಿಗಮದವರಿಂದ ವಿತರಣೆಯಾಗುವ ಆಹಾರದ ಪೊಟ್ಟಣಗಳು, ಮಕ್ಕಳಿಗಾಗಿ ಶುದ್ಧ ಹಾಲಿನ ಸರಬರಾಜು ಮೊದಲಾದವನ್ನು ಉದಾಹರಿಸಬಹುದು. ದೇವಾಲಯದ ನೌಕರರಿಂದ ಧಾರ್ಮಿಕ ಗ್ರಂಥಗಳ ಮರಾಟ ನಡೆಯುತ್ತದೆ. ಪ್ರತಿಕೋಣೆಯ ಹಿಂಭಾಗದಲ್ಲೂ ಪರಿಶುಭ್ರ ಸ್ನಾನ ಹಾಗೂ ಶೌಚಗೃಹಗಳಿವೆ.

ಸರ್ವ ದರ್ಶನದವು ಬೆಳಗ್ಗೆ 6 ಗಂಟೆಗೆ ಆರಂಭವಾಗಿ ಮಧ್ಯರಾತ್ರಿಯವರೆಗೆ ಮುಂದುವರೆಯುತ್ತದೆ. ಮಧ್ಯದಲ್ಲಿ 11 ರಿಂದ 12, ರಾತ್ರಿ 7 ರಿಂದ 8, 10 ರಿಂದ 11 ರವರೆಗೆ ಒಂದೊಂದು ಗಂಟೆಗಳ ಕಾಲ ದೇವರ ನಿತ್ಯ ಪೂಜಾವಿಧಿಗಳಿಗಾಗಿ ಮಾತ್ರ ಸರ್ವದರ್ಶನದಲ್ಲಿ ತಡೆಯುಂಟಾಗುವುದು.

ಸರ್ವದರ್ಶನದ ಕಾಲಪರಿಮಾಣದ ಸುದೀರ್ಘತೆ, ಜೊತೆಗೇ ಆಧುನಿಕ ಸರತಿಯ ಸಾಲಿನ ಸಮುದಾಯಗಳಿಂದಾಗಿ ಯಾತ್ರಿಕರು ಬೆಟ್ಟವನ್ನು ಸೇರಿದ ದಿನವೇ ಹೆಚ್ಚು ಕಷ್ಟವಿಲ್ಲದೆ,ಹೆಚ್ಚು ಹೊತ್ತು ಕಾಯದೆ ಸ್ವಾಮಿದರ್ಶನ ಹೊಂದಲು ಅವಕಾಶವುಂಟಾಗಿದೆ.ಮೊದಲಿಗೆ ಈ ರೀತಿಯಾಗುತ್ತಿರಲಿಲ್ಲ.

ಈಚೆಗೆ ಈ ದೇವಾಲಯದ ನಗರ ಗಮನಾರ್ಹವಾಗಿ ಪರಿಶುಭ್ರತೆಯನ್ನು ಹೊಂದಿದೆ. ದೇವಾಲಯದ ಸುತ್ತಲಿನ ರಸ್ತೆಗಳಲ್ಲಿನ ಅಂಗಡಿಗಳನ್ನು ಎತ್ತಲಾಗಿದ್ದು, ರಸ್ತೆಗಳನ್ನು ಅಗಲ ಮಾಡಲಾಗಿದೆ. (ಅವುಗಳಲ್ಲಿ ಬಹುತೇಕ ಅನಧಿಕೃತವಾಗಿದ್ದವು) ತಿರುಮಲೆಯ ಎಲ್ಲಕಡೆ ಕಂಡು ಬರುತ್ತಿದ್ದ ಬೀದಿ ಮಾರಾಟಗಾರರನ್ನೂ ಕೊಳಚೆ ಪ್ರದೇಶದ ನಿವಾಸಿಗಳನ್ನೂ, ತಿರುಪತಿಯ ಬಳಿ ಪುನರ್ವಸತಿಗೊಳಿಸಲಾಗಿದೆ. ಇಡೀ ಪರಿಸರವೇ ಹೊಚ್ಚ ಹೊಸದಾಗಿ ಪರಿಶುಭ್ರವಾಗಿ ಕಂಡುಬರುತ್ತಿದೆ.

### ಊಟದ ಕೋಣೆಗಳು

ಬೆಟ್ಟದ ಮೇಲೆ ಆಹಾರವನ್ನು ಉಚಿತವಾಗಿ ನೀಡದಿದ್ದಾಗ್ಯ, ದೇವಸ್ಥಾನದ ಊಟದ ಕೋಣೆಗಳಲ್ಲಿ ಅತಿಕಡಮೆ ದರಗಳಲ್ಲಿ ವಿತರಣೆ ಮಾಡಲಾಗುತ್ತಿದೆ. ಇಲ್ಲಿನ ಆಹಾರ ಒಳ್ಳೆಯದೂ ಹೌದು, ದೇವರ ದರ್ಶನದ ನಂತರ ಹೊರಬರುವಾಗ ಉಚಿತವಾಗಿ ದೊನ್ನೆಯಲ್ಲಿ ನೀಡುವ ಪ್ರಸಾದವನ್ನು ತಿಂದ ನಂತರ ನಿಮಗೆ ಹೆಚ್ಚಿನ ಆಹಾರದ ಅಗತ್ಯವೆ ಕಾಣದೆ ಹೋಗಬಹುದು.

ಬೆಟ್ಟದ ಎರಡು ಮಾರ್ಗಗಳನ್ನು – ಒಂದು ಮೇಲಕ್ಕೇರಲು ಒಂದು ಕೆಳಗಿಳಿಯಲು – ಅಗಲ ಗೊಳಿಸಿ ಅಭಿವೃದ್ಧಿ ಪಡಿಸಲಾಗದೆ. ರಸ್ತೆಯಲ್ಲಿ ಕೆಟ್ಟು ನಿಲ್ಲುವ ವಾಹನಗಳಿಗಾಗಿ ಪ್ರತ್ಯೇಕವಾದ ಸ್ಥಳಗಳನ್ನು ಅಲ್ಲಲ್ಲಿ ಯಾರೂ ಕಾಣಬಹುದು. ಇವುಗಳ ದುರಸ್ತಿ ಇವುಗಳಿಗೇ ಬಿಟ್ಟದ್ದಲ್ಲ. ಹೊಸ ಸಂಪರ್ಕ ವ್ಯವಸ್ಥೆಯಿಂದಾಗಿ ದುರಸ್ತಿ ಕಾರ್ಯಾಗಾರಕ್ಕೆ ಕೂಡಲೇ ಸೂಚನೆ ನೀಡುವಂತಾಗಿ, ಸಂಚಾರಿ ದುರಸ್ತಿ ಕಾರ್ಯಾಗಾರ ಘಟಕ ಕೂಡಲೇ ಆಯಾಸ್ಥಳಕ್ಕೆ ಆಗಮಿಸಿ ಅಗತ್ಯ ದುರಸ್ತಿಯನ್ನು ಕೈಗೊಳ್ಳುತ್ತದೆ. ಕೆಟ್ಟ ನಿಂತ ವಾಹನ ಒಂದು ಗಂಟೆಗೂ ಮೊದಲು ಮತ್ತೆ ರಸ್ತೆಯ ಮೇಲೆ ಓಡುತ್ತದೆ. ದೇವಾಲಯದ ಆಡಳಿತ ಯಾತ್ರಿಕರ ಬಗ್ಗೆ ಹೊಂದಿರುವ ಕಾಳಜಿಯನ್ನು ಈ ಅಂಶ ಸ್ಪಷ್ಟಗೊಳಿಸುತ್ತದೆ.

ಅಂದ ಹಾಗೇ ತಿರುಮಲೆ ತಿರುಪತಿಗಳಲ್ಲಿ ಪ್ರತಿ ಮೂರು ನಿಮಿಷಕ್ಕೆ ಒಂದು ಬಸ್ ಹೊರಡುತ್ತದೆ ಎಂದರೆ ನೀವು ನಂಬಲಾರಿರಿ!

ಈಚಿನ ಪರಿವರ್ತನೆಗಳು ತಿರುಪತಿಯಿಂದ ತಿರುಮಲೆಗೆ ನಡೆದು ಹೋಗುವವರನ್ನೂ, ಹಾಗೆ ಹರಕೆ ಹೊತ್ತು ನಡೆಯುವವರನ್ನೂ ಗಮನಿಸುತ್ತವೆ. ಅವರ ವಸ್ತುಗಳನ್ನು ತಿರುಮಲೆಗೆ ಉಚಿತವಾಗಿ ಕೊಂಡೊಯ್ಯಲಾಗುವುದು. ಮಾರ್ಗದುದ್ದಕ್ಕೂ ಕುಡಿಯುವ ನೀರಿನ ಸೌಲಭ್ಯವಿದೆ. ಮಾರ್ಗದುದ್ದಕ್ಕೂ ಇರುವ ನೆರಳಿನ ಅವಕಾಶದಿಂದಾಗಿ ಆತ ವಿಶ್ರಾಂತಿ ಪಡೆದು ಮುಂದುವರಿಯಬಹುದು. ಇಡೀ ಮಾರ್ಗದಲ್ಲಿ ಧ್ವನಿವರ್ಧಕಗಳ ಮೂಲಕ ಭಕ್ತಿ ಸಂಗೀತ ಅವನತ್ತ ಹರಿದು ಬರುತ್ತದೆ. ಇವೆಲ್ಲದರಿಂದ ಆತನ ಮಾರ್ಗಕ್ರಮಣ ವಿಶೇಷವಾಗಿ ಸುಖಕರವಾಗುತ್ತದೆ.

ಭಕ್ತರ ದೇವಾಲಯಕ್ಕೆ ನಡೆಯಬೇಕು ಎನ್ನುತ್ತಾರೆ. 11 ಕಿ. ಮೀ ದೂರ ಹಾಗೂ 3100 ಅಡಿ ಎತ್ತರದ ತಿರುಮಲೆಗೆ ನಡೆಯಲಾಗದ್ದರಿಂದ ಬಸ್‌ನ ಮೊರೆಹೋಗಬೇಕು (ಬಸ್ ಛಾರ್ಜ್ ಸಹ ಹೆಚ್ಚಲ್ಲ ಜೊತೆಗೇ ಬೇಗ ಆಗುವಂತಹದು) ಈಚಿನ ಪರಿವರ್ತನೆಗಳ ನಂತರ ಈಗ ಯಾತ್ರಿಕರು ಬೆಟ್ಟಕ್ಕೆ ನಡೆದು ಹೋಗಲು ಉತ್ಸಾಹಿತರಾಗಲು ಸಾಧ್ಯ.

**ಶ್ರೀ ವಿ. ಎಸ್. ಮಣಿಯನ್**

ಸೌಜನ್ಯ : ಸ್ಟೇಟ್ಸ್‌ಮನ್ 9–3–86



---

(18 ನೇ ಪುಟದಿಂದ)

ಉಪಜೀವ್ಯ ಕಾವ್ಯರತ್ನಗಳನ್ನು ಗ್ರಹಿಸಿದ ವ್ಯಾಸವಾಲ್ಮೀಕಿಗಳಿಗೆ ಋಣಿಯಲ್ಲದ ಕವಿ ಭಾರತದೇಶದ ಯಾವ ಭಾಷೆಯಲ್ಲೂ ಇಲ್ಲ, ನೀತಿ ಧರ್ಮಗಳ ಸುಭದ್ರ ಬುನಾದಿಯ ಮೇಲೆ ಸಂಸ್ಕೃತಿ ಸೌಧವನ್ನು ನಿರ್ಮಿಸಿದ ವಿಶ್ವಕವಿಗಳ ಪಾವನ ಪರಂಪರೆಯಲ್ಲಿ ತುಲಸೀದಾಸರಿಗೊಂದು ಗೌರವಾನ್ವಿತ ಸ್ಥಾನವಿದೆ. ರಾಮಭಕ್ತಿ ಸಾಮ್ರಾಜ್ಯ ಯಾವ ಮಾನವರಿಗೆ ಲಭ್ಯವಾಗಿದೆಯೋ ಆ ಮಾನವರ ಸಂದರ್ಶನವೇ ಬ್ರಹ್ಮಾನಂದ, ಅದನ್ನು ಯಾರೂ ಯಾವ ಭಾಷೆಯಲ್ಲೂ ವಿವರಿಸಲಾಗುವುದಿಲ್ಲ ಏಕೆಂದರೆ ಅದು ಸ್ವಾನುಭವವೇದ್ಯ.

ತುಲಸೀದಾಸರ ಕಾವ್ಯದಲ್ಲಿರುವುದೇನು? ಭಾಷಾಪ್ರೌಢಿಮೆಯೇ? ಅಂದವಾದ ಛಂದೋಮಯ ವಾಣೀವೈಭವವೇ? ಸುಭಗಶೈಲಿಯೆ? ಅಲಂಕಾರ ಪ್ರಯೋಗ ಪರಿಣತಿಯೆ? ವಸ್ತುವಿನ್ಯಾಸವರ್ಣನಾವೈಖರಿಯೆ? ಇದೇ ಪ್ರಶ್ನೆಗಳನ್ನು ಕುಮಾರವ್ಯಾಸನ ಕಾವ್ಯದ ಬಗ್ಗೆ ಕೇಳಬಹುದು. ಅದಕ್ಕಾತ ಕೊಟ್ಟಿರುವ ಉತ್ತರ ಹೀಗಿದೆ–

ಪದದ ಪ್ರಾಢಿಯ ನವರಸಂಗಳ
ಉದಿತವೆಂಬ
ಅಭಿಧಾನ ಭಾವವ ಬೆದಕಲಾಗದು ಬಲ್ಲ
ಪ್ರಾಢರು ಈ ಕಥಾಂತರದಿ
ಇದು ನಿದಾನಿಸೆ ಬರಿಯ ತುಲಸಿಯ
ಉದಕದಂತಿರೆ ಇಲ್ಲಿ
ನೋಳ್ಪುದು ಪದ್ಮನಾಭನಮಹಿಮೆ
ಧರ್ಮ ವಿಚಾರ ಮಾತ್ರವನು

ಈಮಾತು ಸಂತ ಕವಿ ತುಲಸೀದಾಸನ ಕಾವ್ಯಗಳಿಗೂ ಅನ್ವಯಿಸುತ್ತದೆ. ಹಸು ಕಪ್ಪಾದರೆ ಹಾಲು ಕಪ್ಪಾಗಲಾರದು–ಎಂಬಂತೆ ಗ್ರಾಮ್ಯ ಭಾಷೆಯಲ್ಲಿ ಬರೆದರೇನಂತೆ–ಸೀತಾರಾಮರ ದಿವ್ಯ ವೃತ್ತಾಂತವಾದ್ದರಿಂದ–ಅದು ಪುಷ್ಟಿದಾಯಕ–ತುಷ್ಟಿಕಾರಕ–ಸಂತುಷ್ಟಿದಾಯಕವಾಗಿರುವುದರಲ್ಲಿ ಸಂದೇಹವಿಲ್ಲ.

ಯಾವುದೋ ಬೆಟ್ಟದಲ್ಲಿ ಎಂದೊ ಚಿಕ್ಕದಾಗಿ ಹುಟ್ಟಿದ ನದಿ ಮೆಲ್ಲನೆ ಕೆಳಗಿಳಿದು ಬರುತ್ತದೆ. ಕ್ರಮೇಣ ಅನೇಕ ಉಪನದಿಗಳು ಸೇರಿ ಕೊಳ್ಳುತ್ತವೆ. ಆಗ ಅದು ಬಿರುಸಾಗಿ ಹರಿಯುತ್ತದೆ ನೂರಾರು ಮೈಲು ಪಯಣ ಮಾಡುತ್ತ ಸಾವಿರಾರು ಜನಕ್ಕೆ ಅನ್ನ ನೀಡುತ್ತದೆ. ಕೃತಜ್ಞತಾಪೂರ್ವಕವಾಗಿ ಜನರು ಮಾಡಿದ ಪೂಜೆಯನ್ನು ಮೌನವಾಗಿ ಸ್ವೀಕರಿಸುತ್ತದೆ–ಹಿಗ್ಗದೆ ಸ್ವೀಕರಿಸುತ್ತದೆ!! ಈ ಮಧ್ಯೆ ಯಾರಾದರೂ ಕಲ್ಲೆಸೆದರೆ–ನನಗೆ ಕಲ್ಲೆಸೆದು ಅವರು ಸಂತೋಷಪಟ್ಟುಕೊಂಡರೆಂದು ಭಾವಿಸಿ, ತಾನೂ ಸಂತೋಷವಾಗಿ ಕಲಕಲನಾದ ಮಾಡಿ ನಗುತ್ತ ಮುಂದೆ ಹೋಗುತ್ತದೆ. ಕಡೆಗೆ ಸಾಗರ ಗರ್ಭದಲ್ಲಿ ಸೇರಿ ಹೋಗುತ್ತದೆ.

ತುಲಸೀದಾಸರ ಜೀವನದೀ ವೃತ್ತಾಂತವೂ ಇಷ್ಟೇ. ಅವರ ಹೆಸರು ಶಾಶ್ವತ–ಅವರ ಕೀರ್ತಿ ಶಾಶ್ವತ–ಅವರ ಕಾವ್ಯಗಳು ಅಜರಾಮರ. ಭಾವ ಭಾಗೀರಥಿ–ಭಕ್ತಿಯಮುನೆ–ಶ್ರದ್ಧಾ ಸರಸ್ವತಿಯರ ಪುನೀತ ಸಂಗಮ ಅವರ ಕಾವ್ಯಗಳು. ಈ ಸಂತಕವಿ ಬಾಳಿನಲ್ಲಿ ಅನೇಕ ಏರಿಳಿತಗಳನ್ನು ಕಂಡವರು. ಬೇವು ಬೆಲ್ಲ ಸವಿದವರು, ಜಗಜ್ಜೀವನವನ್ನು ಕಂಡು ಕನಿಕರ ಪಟ್ಟವರು–ಅನೇಕ ತತ್ತ್ವ ಮತ ಸಂಪ್ರದಾಯಗಳ ಚಿನ್ತನ ಮನ್ಥನ ನಡೆಸಿದವರು–ಕಲೆಗಳಲ್ಲಿ ಪರಮಕಲೆ ಜೀವನದ ಲಲಿತಕಲೆಯೆಂಬಂತೆ ಬಾಳಿದವರು. ಲೋಕ ಜೀವನವನ್ನು ಹಸನುಗೊಳಿಸುವ ಸಮನ್ವಯದ ಸುಲಭ ಸೂತ್ರವನ್ನೂ ಕಂಡುಕೊಂಡವರು. ದ್ವೈತದಿಂದ ಅದ್ವೈತಕ್ಕೇರಿದವರು. ಅದ್ವೈತದಿಂದ ದ್ವೈತಕ್ಕಿಳಿದವರು, ಈ ಏರಿಳಿತಗಳಾಟ ಮಾಡಿಸಿದಾತನನ್ನು ಕಂಡು ಕೊಂಡಾಡಿ ಆನಂದಿಸಿದವರು.

---

# ಭಕ್ತಿಭಂಡಾರಿ ಬಸವಣ್ಣನವರು

ವಚನ ಸಾಹಿತ್ಯವೆಂದ ಕೂಡಲೇ ಕಣ್ಣೆದುರು ಬಂದು ನಿಲ್ಲುವ ಹಿರಿಯ ಚೈತನ್ಯಗಳಲ್ಲಿ ಜಗ ಜ್ಯೋತಿಯಾಗಿ, ಭಕ್ತಿಗೇ ಭಂಡಾರಿ ಎನಿಸಿ, ಅಪೂರ್ವವಾದ ಹೃದಯ ವೈಶಾಲ್ಯತೆಯಿಂದ ಬೆಳಗಿದ; ನಾಡನ್ನು–ನುಡಿಯನ್ನು, ನಡೆಯನ್ನು ಬೆಳಗಿಸಿದ ವ್ಯಕ್ತಿಯೆಂದರೆ ಬಸವೇಶ್ವರರು ಅಥವಾ ಅಕ್ಕರೆಯಿಂದ ಎಲ್ಲರಿಂದಲೂ ಅಣ್ಣನೆಂದು ಗೌರ ವಿಸಲ್ಪಡುತ್ತಿರುವ ಬಸವಣ್ಣನವರು. ಇವರು ರಚಿಸಿದ್ದು ನೂರಾರು ವಚನಗಳು. ಆದರೆ ಬಯಸಿದ ಫಲ ಸಮಾಜೋದ್ಧಾರ, ಸಮಾಜ ಸುಧಾರಣೆ. ತಮ್ಮ ಸುತ್ತಲಿನ ಸಮಾಜದ ಬಗೆಗೆ ಇವರದು ಜೀವಂತ ತುಡಿತ. ಹಾಗಾಗಿ ಸಮಾಜದ ಜನರಿಗೆ ಅನೇಕ ವಿಧವಾದ ತಿಳುವಳಿಕೆಯನ್ನು ತಮ್ಮ ವಚನಗಳ ಮೂಲಕ ನೀಡಿ, ಸಮಾಜದ ರೋಗ ರುಜಿನಗಳನ್ನು ನಿವಾರಿಸಿದ ಓರ್ವ ತಜ್ಞರೂ ಹೌದು.

ಬಸವಣ್ಣನವರ ಒಂದೊಂದು ವಚನವೂ ಒಂದು ಅಮೂಲ್ಯ ಜ್ಞಾನಭಂಡಾರ. ಸಮಾಜ ವನ್ನು ತೆರೆದ ಕಣ್ಣಿನಿಂದ, ಮನಸ್ಸಿನಿಂದ ಕಂಡ ಇವರ ಎಚ್ಚೆತ್ತ ಬುದ್ಧಿ ಕುರುಡನಂತೆ ಕಣ್ಮುಚ್ಚಿ, ಹೆಳವನಂತೆ ಕೈಕಟ್ಟಿ ಕುಳಿತುಕೊಳ್ಳಲಾರದು. ಕೂಡಲೇ ತಾವು ಕಂಡ ತಪ್ಪನ್ನು ಕಂಡಂತೆ ತಿಳಿಸಿ, ತಿದ್ದುವ, ಇವರದು ನೇರ ನಡವಳಿಕೆ. ವ್ಯಕ್ತಿಯು ತನ್ನ ನೆರೆಹೊರೆಯವರೊಂದಿಗೆ ವ್ಯವಹರಿಸುವಾಗ ತೋರುವ ಬಿಂಕ ಬಿಗುಮಾನವನ್ನು ತಮ್ಮ ಒಂದು ವಚನದಲ್ಲಿ ಅರ್ಥಪೂರ್ಣವಾಗಿ ವಿವೇಚಿಸಿದ್ದಾರೆ—

ಏನುಬಂದಿರಿ ಹದುಳ್ದಿದ್ದಿರೆಂದರೆ
ನಿಮ್ಮ ಮೈಸಿರಿ ಹಾರಿ ಹೋಹುದೆ
ಕುಳ್ಳಿರೆಂದರೆ ನೆಲ ಕುಳಿಹೋಹುದೆ
ಒಡನೆ ನುಡಿದರೆ ಶಿರ ಹೊಟ್ಟೆಯೊಡೆಯುವುದೆ?

ಎಂದು ಮಾರ್ಮಿಕವಾಗಿ ನುಡಿಯುವುದರ ಜೊತೆಗೆ

"ಕೊಡಲಿಲ್ಲದಿದ್ದರೊಂದು, ಗುಣವಿಲ್ಲದಿದ್ದರೆ
ತಲೆಕೆಡಹಿ ಮೂಗಕೊಯ್ಯದೆ ಮಾಬನೆ
ಕೂಡಲ ಸಂಗಮದೇವ"

ಎಂಬ ಎಚ್ಚರಿಕೆಯನ್ನೇ ನೀಡಿದ್ದಾರೆ ನೆರೆಹೊರೆ ಯವರ ಬಗೆಗೆ ಕ್ಷುಲ್ಲಕವಾಗಿ, ಹೀನಾಯವಾಗಿ ಮಾತನಾಡುವವರನ್ನು ಕಂಡರಂತೂ ಈ ಮಹಾ ನುಭಾವರಿಗೆ ಎಲ್ಲಿಲ್ಲದ ಕೋಪ. ಆ ಕೋಪ ಎಷ್ಟು ನಿರ್ದಾಕ್ಷಿಣ್ಯ ಎಂಬುದನ್ನು—

ಲೋಕದಾ ಡೊಂಕ ನೀವೇಕೆ ತಿದ್ದುವಿರಿ
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ

ಎಂಬ ವಚನದಲ್ಲಿ ನಾವು ಪ್ರತ್ಯಕ್ಷವಾಗಿ ಕಾಣ ಬಹುದಷ್ಟೇ ಅಲ್ಲದೆ 'ನೆರೆವುನೆಯವರ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವಾ' ಎಂಬ ಮಾತು ತೃತೀಯ ಹಾಗೂ ಚಾಡಿಕೋರ ಸ್ವಭಾವದ ಜನರಿಗೆ ನೀಡಿರುವ ಛಡಿ ಏಟೆಂಬುದು ಮನಗಾಣದಿರದು. ಹಾಗಾದರೆ ನಮ್ಮ ಮಾತು ಕತೆ ಹೇಗಿರಬೇಕು ಎಂಬ ಸಂಶಯ ಮೂಡಬಹು ದಾದರೆ, ಅದಕ್ಕೆ ಉತ್ತರವೇನೋ ಎಂಬಂತೆ—

ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು
ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು

ಎಂಬ ವಚನವಿದೆ. ಹೀಗೆ ನಿರಾಳವೂ,ನಿರ್ಮಲವೂ, ನಿಷ್ಕಪಟವೂ ಆದ ಗುಣ, ಸ್ವಭಾವ, ನಡವಳಿಕೆ, ಮಾತುಕತೆ ಅತ್ಯಾವಶ್ಯಕವೆಂದು ಅಭಿಪ್ರಾಯ ಪಡುತ್ತಾರೆ. ಸಮಾಜದಲ್ಲಿ ಜನರು ಮೇಲು, ಕೀಳು ಎಂಬ ತೊಳಲಾಟದಲ್ಲಿ ಸಿಲುಕಿ ನರಳು ತ್ತಿರುವುದನ್ನು ಕಂಡ ಬಸವಣ್ಣನವರು—

ಕೊಲುವವನೇ ಮಾದಿಗ
ಹೊಲಸ ತಿಂಬುವವನೇ ಹೊಲೆಯ
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ಕೂಡಲ ಸಂಗನ ಶರಣರೇ ಕುಲಜರು

ಎಂದು ಸೂತ್ರ ಪ್ರಾಯವಾಗಿ ಹೇಳಿದ್ದಾರೆ.

ಲೋಕದ ಜನರು ಕೇವಲ ಆಡಂಬರದವರು. ಹಾಗೂ ಬಹಳ ಕಪಟಿಗಳು ಎಂಬುದನ್ನು ಎಷ್ಟು ಚಿತ್ರವತ್ತಾಗಿ ಪರಿಚಯಿಸಿದ್ದರೆಂಬುದಕ್ಕೆ—

ಕಲ್ಲನಾಗರ ಕಂಡರೆ ಹಾಲನೆರೆ ಎಂಬರು
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ
ಉಂಬ ಜಂಗಮ ಬಂದರೆ ಹೋಗೆಂಬರಯ್ಯ
ಉಣದ ಲಿಂಗಕ್ಕೆ ಬೋನವ ಹಿಡಿಎಂಬರಯ್ಯ

ಎಂಬ ವಚನವೇ ಸಾಕ್ಷಿ. ಜನರು ತೋರಿಕೆಯ ಔದಾರ್ಯ, ಕರುಣೆ, ಸಹಾನುಭೂತಿ ತೋರಿಸಿ ಯಾರೇ ವಿನಃ ನಿಜವಾಗಿಯೂ ತಾವು ಯಾರಿಗೇ ಆಗಲಿ ಎಂಥದ್ದೇ ಸಂದರ್ಭದಲ್ಲಾಗಲೀ ಮನಃ ಪೂರ್ವಕವಾಗಿ ಏನನ್ನೂ ನೀಡರು. ಏನನ್ನೂ ಮಾಡರು ಎಂಬ ಅರ್ಥ ಇಲ್ಲಿ ಧ್ವನಿತವಾದಂತಿದೆ. ಹೀಗಿರುವಲ್ಲಿ ನಾವು ಕೇವಲ ಇಂಥ ಮಂದಿಯನ್ನೇ ನಂಬಿ ನೆಚ್ಚಿ ಕುಳಿತರೆ ಅದರ ಪರಿಣಾಮ ನಿಜಕ್ಕೂ ಉತ್ತಮವಾಗಲಾರದು ಎಂಬುದನ್ನು—

ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ
ಚಂದ್ರಕುಂದೆ ಕುಂದುವುದಯ್ಯಾ
ಚಂದ್ರಂಗೆ ರಾಹು ಅಡ್ಡ ಬಂದಲ್ಲಿ ಅಂಬುಧಿ
ಬೊಬ್ಬಿಟ್ಟಿತ್ತೇ ಅಯ್ಯಾ
ಅಂಬುಧಿಯ ಮುನಿಯಾಪೋಷಣವ ಕೊಂಬಲ್ಲಿ
ಚಂದ್ರಮನಡ್ಡ ಬಂದನೇ

ಎಂಬ ಮಾತುಗಳ ಮೂಲಕ ಸ್ಪಷ್ಟಪಡಿಸುವುದ ರೊಂದಿಗೆ 'ಯಾರಿಗ್ಯಾರೂ ಇಲ್ಲ ಕೆಟ್ಟವಂಗೆ ಕೆಳೆ ಯಿಲ್ಲ' ಎಂದು ಹೇಳುತ್ತಾ ಲೋಕದ ನಡವಳಿಕೆಯ ಉತ್ತಮ ಚಿತ್ರಣವನ್ನು ನೀಡಿದ್ದಾರೆ.

ನಾವು ಶಾಶ್ವತವಾದ ಬಂಧುವನ್ನು ಹುಡುಕ ಬೇಕಾದದ್ದು ಅತ್ಯಾವಶ್ಯಕ. ಅದಕ್ಕಾಗಿ "ಜಗದ ನೆಂಟ ನೀನೇ ಅಯ್ಯಾ ಕೂಡಲ ಸಂಗಮದೇವಾ" ಎಂದು ಬಸವಣ್ಣನವರು ದೈವದ ಮೊರೆ ಹೋಗಿ ದ್ದಾರೆ. ಆದರೆ ಆ ದೈವ ಅಷ್ಟು ಸುಲಭವಾಗಿ ನಮಗೆ ದೊರಕಲಾರದು. ಏಕೆಂದರೆ ಮಾನವನ ಮನಸ್ಸು ಬಹಳ ಚಂಚಲವಾದದ್ದು. ಅದನ್ನು ಬಸವಣ್ಣನವರ ಮಾತಿನಲ್ಲಿಯೇ ಹೇಳುವುದಾದರೆ "ಮನವೆಂಬುದು ಮರ್ಕಟದಂತೆ ಅತ್ತಲಿತ್ತ ಹಾರುತ್ತಿದೆ." ಹಾಗಾದರೆ ಕಪ್ಪೆಯನ್ನು ತೂಕ ಮಾಡಿದಂತೆ ಈ ಮನಸ್ಸನ್ನು ಒಂದೆಡೆಗೆ ಎಳೆದು ತರುವುದು ಅಷ್ಟೇ ಕಷ್ಟದಾಯಕ ಎಂದಂತಾಯಿತು. ಬಸವಣ್ಣನವರು ಇದಕ್ಕೂ ಒಂದು ಪರಿಹಾರ ಕಂಡು ಹಿಡಿದಿದ್ದಾರೆ. ಅದೆಂದರೆ—

ಅತ್ತಲಿತ್ತ ಹೋಗದಂತೆ
ಹೆಳವನ ಮಾಡಯ್ಯ ತಂದೆ
ಸುತ್ತಿ ಸುಳಿದು ನೋಡದಂತೆ ಕುರುಡನಾ
ಮಾಡಯ್ಯ ತಂದೆ ಕೇಳದಂತೆ ಕಿವುಡನಾ
ಮಾಡಯ್ಯ ತಂದೆ

ಎಂದು ಆ ದೈವವನ್ನೇ ಮೊರೆ ಹೋಗುವುದು. ಹಾಗಿಲ್ಲವೆ "ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸದಿರಯ್ಯಾ, ಪಶುವೇನ ಬಲ್ಲದು?

'ಭಾರ್ಗವಿಶ್ರೀ'

ಹಸುರೆಂದೆಳೆಸುವುದು." ಎಂದು ಆ ದೈವಕ್ಕೇನೇ ನಿರ್ಬಂಧ ಹಾಕುವುದು, ನಿಜಕ್ಕೂ ಹೆಚ್ಚು ಲಾಭಕರ. ಬಸವಣ್ಣನವರ, ಈ ಮೇಲಿನ ಎರಡೂ ಮಾತುಗಳೂ ನಿಜಕ್ಕೂ ಆ ದೈವವೇ ಬಂದು ನಮ್ಮೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕು. ಅಷ್ಟು ಹೃದಯಂಗಮವಾಗಿದ್ದು ಭಕ್ತನೋರ್ವನ ಸರಳ ಹೃದಯದ ಪರಿಚಯಮಾಡಿಕೊಡುತ್ತವೆ. 'ಬಲ್ಲವನೇ ಬಲ್ಲ ಬೆಲ್ಲದ ಸವಿಯ' ಎಂಬಂತೆ, ಬಸವಣ್ಣನವರಿಗೆ ದೈವದ ಮಹತ್ವ ಸ್ವಯಂ ಅನುಭವವೇದ್ಯವಾಗಿದೆ. ಆ ಅನುಭಾವವನ್ನೇ–

ನೀನೊಲಿದರೆ ಕೊರಡು ಕೊನರುವುದಯ್ಯಾ
ನೀನೊಲಿದರೆ ಬರಡು ಹಯನಹುದಯ್ಯಾ
ನೀನೊಲಿದರೆ ಸಕಲಪಡಿಪದಾರ್ಥಂಗಳೂ
ಇದಿರಲ್ಲಿರ್ಪವು ಕೂಡಲ ಸಂಗಮದೇವಾ

ಎಂಬ ವಚನದಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಅಲ್ಲದೆ 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ, ನಿಮ್ಮ ಪಾದ ಸಾಕ್ಷಿ, ಎನ್ನ ಮನಸಾಕ್ಷಿ, ಕೂಡಲ ಸಂಗಮದೇವ ಎನಗಿದೇ ದಿಬ್ಯ'– ಎಂಬ ಮಾತು ಅವರ ನಯವಿನಯಗಳ ಪರಿಚಯ ಮಾಡಿಕೊಡುತ್ತದೆ. ಆ ನಯವಿನಯಗಳಾದರೂ ಏಕೆಂದರೆ, "ಅರಿತರೆ ಶರಣ ಮರೆತರೆ ಮಾನವ'' ಎಂಬಂತೆ ಅವರು ಜ್ಞಾನಾರ್ಜನೆ ಮಾಡಲು ನೆರವಾದ ಏಕೈಕ ಸಾಧನ. 'ಕಾಂಚನವೆಂಬ ನಾಯ ನಚ್ಚಿ, ನಿಮ್ಮ ನಾನು ಮರೆದೆನಯ್ಯಾ, ಕಾಂಚನಕ್ಕೆ ವೇಳೆಯಲ್ಲದೆ, ಲಿಂಗಕ್ಕೆ ವೇಳೆಯಿಲ್ಲ' ಎಂಬ ಸ್ವವಿಮರ್ಶೆಯೊಂದಿಗೆ "ಹಡಕಿಗೆ (ಹೊಲಸಿಗೆ) ಮೆಚ್ಚಿದ ಸೊಣಗ (ನಾಯಿ) ಅಮೃತದ ಸವಿಯ, ಬಲ್ಲುದೇ" ಎಂಬ ಸಂಶಯವನ್ನೂ ತಾಳುತ್ತಾರೆ. ಆದರೆ ಅಷ್ಟಕ್ಕೇ ನಿಲ್ಲದೆ–

ಉತ್ತಮ ಕುಲದಲಿ ಹುಟ್ಟಿದೆನೆಂಬ
ಕಷ್ಟತನದ ಹೊರೆಯ ಹೊರಿಸದಿರಯ್ಯಾ
ಆನು ಹಾರುವನೆಂದರೆ ಕೂಡಲ
ಸಂಗಯ್ಯ ನಗುವನಯ್ಯ

ಎಂದು ತನಗೆ ತಾನೇ ನಾಚಿಕೆ ಪಟ್ಟುಕೊಳ್ಳುತ್ತಾರೆ. ಇವರ ಈ ಮಾತಿನಲ್ಲಿ ದೈವ ಭಕ್ತಿಗೆ, ಮುಕ್ತಿಗೆ, ಉತ್ತಮ ಜಾತಿ-ಹೀನ ಜಾತಿ ಎಂಬ ತಾರತಮ್ಯ ಸಲ್ಲದೆಂಬ ಭಾವ ಅಡಕವಾಗಿದೆ. ಅಥವಾ ಉತ್ತಮಜಾತಿಯೊಂದರಿಂದಲೇ ಮಾನವ ಮೇಲೇರಲು ಸಾಧ್ಯವಿಲ್ಲ ಅದರೊಂದಿಗೆ ಉತ್ತಮ ಸಂಸ್ಕೃತಿ, ಸಂಸ್ಕಾರ ಅಗತ್ಯ ಎಂಬುದೂ ಇಲ್ಲಿ ಹುದುಗಿದೆ. ತಾವು ಹೇಗೆ ಭಕ್ತಿಯ ಹಾದಿಗೆ ಬಂದರೆಂಬುದನ್ನು–

ಭಕ್ತಿ ಇಲ್ಲದ ಬಡವ ನಾನಯ್ಯ
ಕಕ್ಕಯ್ಯನ ಮನೆಯಲ್ಲು ಬೇಡಿದೆ
ಚೆನ್ನಯ್ಯನ ಮನೆಯಲ್ಲು ಬೇಡಿದೆ
ದಾಸಯ್ಯನ ಮನೆಯಲ್ಲೂ ಬೇಡಿದೆ''
ಎಲ್ಲಾ ಪುರಾತನರು ನೆರೆದು ಭಕ್ತಿ ಭಿಕ್ಷೆವ
ನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು

ಎಂಬ ಮಾತಿನಲ್ಲಿ ತಿಳಿಸಿರುವುದಲ್ಲದೆ ವ್ಯಕ್ತಿಯು ಪರಿಪೂರ್ಣತೆಯನ್ನು ಪಡೆಯಬೇಕಾದ ನಿಚ್ಚಳ ಹಾದಿಯನ್ನು ತೋರಿದ್ದಾರೆ. ಮಾನವನು ಯಾವುದನ್ನೇ ಆಗಲಿ ಗಳಿಸುವಷ್ಟೇ, ಉಳಿಸಿಕೊಳ್ಳಬೇಕಾದದ್ದೂ ಅವನ ಕರ್ತವ್ಯವಾಗಿದೆ. ಹಾಗೆಯೇ ತಮ್ಮ ಭಕ್ತಿ ಗಳಿಕೆಯೂ ಉಳಿಯಲು ಅವರು ಮಾಡಿರುವ ಪ್ರಯತ್ನ ನಿಜಕ್ಕೂ ಶ್ಲಾಘನೀಯ.

ಹೊನ್ನಿನೊಳಗೊಂದು ಸೀರೆಯೊಳಗೊಂದು
ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ
ನಿಮ್ಮ ಶರಣರಿಗಲ್ಲದೆ ಮತ್ತೊಂದಕ್ಕೆ
ಮಾಣೆನು

ಎಂಬ ಅವರ ವಚನ, ಹಾಗೆಯೇ–

"ಹರಿವ ಹಾವಿಗಂಜೆ, ಉರಿವ ನಾಲಿಗೆಗಂಜೆ
ಪರಸ್ತ್ರೀ ಪರಧನವೆಂಬೀ ಜೂಜಿಗಂಜುವೆನಯ್ಯ

ಎಂಬ ಮಾತುಗಳು ಅವರ ವೈರಾಗ್ಯಕ್ಕೆ, ನಿಷ್ಕಾಮಕ್ಕೆ, ಹೆಣ್ಣು, ಹೊನ್ನು ಮಣ್ಣಿನ ಬಗೆಗೆ ಅವರಿಗಿದ್ದ ನಿರ್ಲಿಪ್ತತೆಗೆ ಹಿಡಿದ ಕೈಗನ್ನಡಿಯಾಗಿದೆ. 'ಪರವಧುವನು ಮಹಾದೇವಿ ಎಂಬೆ' ಎಂಬಲ್ಲಿ ಹಿರಿಯತನವಿದ್ದರೆ; "ಮೊಲೆಯುಂಬ ಭಾವತಪ್ಪಿ ಅಪ್ಪಿದವರ ತಲೆಯಕೊಂಬ'' (ಹೆಣ್ಣಿನ ಬಗ್ಗೆ ತಾಯಿಯೆಂಬ ಹಿರಿಯ ದೃಷ್ಟಿಬಿಟ್ಟು, ಪ್ರೇಯಸಿಯಾಗಿ ಕಾಣ ಹೊರಟರೆ ಅಂಥವರ ನಾಶ ಶತಸ್ಸಿದ್ಧ) ಎಂಬಲ್ಲಿ ಬಸವಣ್ಣನವರು ಹೆಣ್ಣುಮಕ್ಕಳ ಬಗ್ಗೆ ಹೊಂದಿದ್ದ ಗೌರವ, ಆದರ, ಪೂಜ್ಯಭಾವನೆ ಎಲ್ಲವೂ ಅಡಕವಾಗಿದೆ. ಬಸವಣ್ಣನವರು ಇಂಥ ಉದಾತ್ತ ವ್ಯಕ್ತಿಯಾದುದರಿಂದಲೇ ಸಮಾಜದಲ್ಲಿ ಹೆಣ್ಣುಮಕ್ಕಳಿಗೂ ಸಮಾನಾವಕಾಶ ಸ್ಥಾನ, ಮಾನಗಳು ದೊರಕಬೇಕೆಂಬ ಕ್ರಾಂತಿಗೂ ಮೂಲ ಕಾರಣರಾಗಿದ್ದರು. ಅಂದಾಕ್ಷಣಕ್ಕೆ ಇವರು ಸಂನ್ಯಾಸಿಯ ಬದುಕು ನಡೆಸಿದರೆಂದು ಅರ್ಥವಲ್ಲ. "ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಗೆ" ಎಂಬ ಅವರ ಮಾತು ಅವರ ಬಾಳಿನ ಅನ್ಯೋನ್ಯತೆಯನ್ನೂ, ಅವರ ನೀತಿಯ ಎಲ್ಲೆಕಟ್ಟನ್ನೂ ಅರಿವು ಮಾಡಿಕೊಡುತ್ತದೆ. 'ಶರಣಸತಿ ಲಿಂಗಪತಿ'ಯಾದ್ದರಿಂದ ಗಂಡು ಹೆಣ್ಣು ಎಂಬ ಭೇದವಿಲ್ಲದೆ ಯಾರು ಬೇಕಾದರೂ, ದೈವವನ್ನು ಆರಾಧಿಸಬಹುದು. ಆದರೆ ಹೆಣ್ಣಿನ ಬಗ್ಗೆ 'ಒಲಿದರೆನಾರಿ, ಮುನಿದರೆ ಮಾರಿ', ಎಂಬಂಥ ಅವಹೇಳನದ ಮಾತು ಅವರಿಗೆ ಸರಿಬೀಳುತ್ತಿರಲಿಲ್ಲವೆಂದು ಕಾಣುತ್ತದೆ. ಆದ್ದರಿಂದಲೇ —

ಮಾರಿ ಮಸಣಿ ಎಂಬುವು ಬೇರಿಲ್ಲ ಕಾಣಿರೊ
ಕಂಗಳು ತಪ್ಪಿ ನೋಡಿದರೆ ಮಾರಿ
ನಾಲಿಗೆ ತಪ್ಪಿ ನುಡಿದರೆ ಮಾರಿ
ನಮ್ಮ ಕೂಡಲ ಸಂಗನ ನೆನಹ ಮರೆದರೆ ಮಾರಿ

ಹೀಗೆ ಹೆಣ್ಣನ್ನು ಅಪಾರ್ಥ ಮಾಡಿಕೊಂಡಲ್ಲಿ, ಅವಮಾನಿಸಿದಲ್ಲಿ, ಅವಳನ್ನು ಶೋಷಿಸಿದಲ್ಲಿ ಮಾತ್ರ ನಾವು ಅದರ ದುಷ್ಫಲವನ್ನು ಅನುಭವಿಸಿಯೇ ತೀರಬೇಕೆನ್ನುವುದು ಅವರ ಸಿದ್ಧಾಂತವಿದ್ದಂತಿದೆ.

ದೈವ ಸಾಯುಜ್ಯವನ್ನು ಹೊಂದಲು ಯಜ್ಞಯಾಗಾದಿಗಳೆಂಬ ಕಠಿಣಪದ್ಧತಿಯನ್ನೇ ಅನುಸರಿಸಬೇಕಾಗಿಲ್ಲ. ಏಕೆಂದರೆ 'ಕಾಯಕವೇ ಕೈಲಾಸ'ವಾದ್ದರಿಂದ ಮಾನವನು ತನ್ನ ದುಡಿಮೆಯಲ್ಲಿ ನಿಷ್ಠಾ ಶ್ರದ್ಧೆಗಳಿಂದಿದ್ದರೆ, ಅದರ ಮೂಲಕವೇ ಸ್ವರ್ಗಸುಖವನ್ನು, ದೈವೀ ಅನುಭವವನ್ನು ಪಡೆಯಬಹುದು ಎಂದರು. ಮತ್ತೂ ಮುಂದುವರೆದು "ವೇದಪ್ರಿಯ ಶಿವನೆಂಬರು ವೇದ ಪ್ರಿಯ ಶಿವನಲ್ಲ, ನಾದ ಪ್ರಿಯ ಶಿವನೆಂಬರು ನಾದಪ್ರಿಯ ಶಿವನಲ್ಲ. ಭಕ್ತಿಪ್ರಿಯ'' ಎಂದು ಹೇಳುವುದರ ಮೂಲಕ ಜನರಿಗೆ ದೈವವನ್ನು ಕಾಣಲು ಸರಳ ಸುಲಭಮಾರ್ಗವನ್ನು ತೋರಿಸಿಕೊಟ್ಟರು. ಆದರೂ ಜನರಲ್ಲಿ ಹರಿಹರ ಎಂಬ ತಾರತಮ್ಯ ಭಾವ ತಾಂಡವವಾಡುತ್ತಿದ್ದುದನ್ನು ಕಂಡು, "ದೇವನೊಬ್ಬ ನಾಮ ಹಲವು'' ಎಂಬ ಸಾಮರಸ್ಯವನ್ನು ತರಲು ಪ್ರಯತ್ನಿಸಿದರು. ಬಲಿಯಂತಹ ಅಮಾನವೀಯ ಕ್ರೂರ ಪದ್ಧತಿಯನ್ನು ಕಂಡು 'ದಯವಿಲ್ಲದಾ ಧರ್ಮ ಯಾವುದಯ್ಯಾ, ದಯವೇ ಬೇಕು ಸಕಲ ಜೀವಿಗಳೆಲ್ಲರಲಿ' ಎಂದು ಸಿಡಿದೆದ್ದಿದ್ದಾರೆ. ಇಷ್ಟೆಲ್ಲಾ ತಿಳುವಳಿಕೆ ಅನುಭವ ತಮ್ಮಲ್ಲಿದ್ದರೂ ಅವರದು ತುಂಬಿದ ಕೊಡದಂಥ ಸ್ವಭಾವ. ಹಾಗಾ[ಗಿ] ಅವರಿಗೆ ತಾನೇ ಎಲ್ಲ ಬಲ್ಲವನೆಂಬ ಅಹಂ ಇಲ್ಲ ತಾನಿನ್ನೂ ಅರಿಯಬೇಕಾದದ್ದು ಬಹಳವಿದೆಯೆಂಬ ಭಾವನೆ. ಅದನ್ನೇ—

ಅರ್ಚಿಸಲರಿಯೆ, ಪೂಜಿಸಲರಿಯೆ
ನಿಚ್ಚ ನಿಚ್ಚ ಶಿವರಾತ್ರಿಯ ಮಾಡಲರಿಯೆ
ನಿಮ್ಮ ಲಾಂಛನವ ಧರಿಸಿಪ್ಪ ಉದರ
ಪೋಷಕನಾನಯ

ಎಂಬ ವಚನದಲ್ಲಿ ಆಡುವುದರ ಮೂಲಕ ಡಾಂಭಿ[ಕ] ಭಕ್ತಿಯುವರಿಗೂ ಒಂದು ಪೆಟ್ಟು ನೀಡಿದ್ದಾ[ರೆ] ಭಕ್ತ ಹೃದಯದಿಂದ ದೈವವನ್ನು ಒಲಿಸಿಕೊ[ಳ್ಳ]ಬಹುದೇ ಹೊರತು ಭಕ್ತ ವೇಷದಿಂದ ನಾ[…] ದೈವ ಪ್ರೀತಿಯನ್ನು ಕೃಪೆಯನ್ನು ಪಡೆಯಲಾಗದ ಎಂಬುದು ಇವರ ದೃಢನಂಬಿಕೆ. ಇದಕ್ಕಾಗಿ–

ಎನಿಸುಕಾಲ ಕಲ್ಲು ನೀರೊಳಗಿದ್ದರೇನು ?
ನೆನೆದು ಮೃದುವಾಗಬಲ್ಲದೆ ?

ಎನಿಸುಕಾಲ ನಿಮ್ಮ ಪೂಜಿಸಿ ಏನೆನಯ್ಯಾ,
ಮನದಲ್ಲಿ ದೃಢವಿಲ್ಲದನ್ನಕ್ಕ?
ನಿಧಾನವ ಕಾಯ್ದಿರ್ದ ಬೆಂತರದಂತೆ,ಅದರವಿಧಿ
ಎನಗಾಯಿತ್ತು ಕೂಡಲ ಸಂಗಮದೇವಾ

ಎಂದು ತಮ್ಮನ್ನು ತಾವೇ ವಿಮರ್ಶಿಸಿಕೊಂಡಿದ್ದಾರೆ. ಹಾಗಿದ್ದರೆ ನಮ್ಮ ಮನಃಸ್ಥಿತಿ ಹೇಗಿರಬೇಕೆಂಬ ಸಂಶಯ ಸಹಜವಾಗಿ ಮೂಡುತ್ತದೆ. "ಹೊಲಬುಗೆಟ್ಟ ಶಿಶು ತನ್ನ ತಾಯನರಸುವಂತೆ, ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ'' ಆರ್ತತೆಯಿಂದ ನಾವು ದೈವವನ್ನು ಬಯಸಬೇಕು.

ದೈವಭಕ್ತಿ ಹೇಗೆ ನಿರಾಡಂಬರವಾಗಿರಬೇಕೋ ಹಾಗೆಯೇ ಪೂಜೆಯೂ ಅಷ್ಟೇ ಸರಳವಾಗಿರಬೇಕು. ಅದಕ್ಕೂ ಬಸವಣ್ಣನವರದೇ ಅದ ಅಮೂಲ್ಯ ಮಾರ್ಗವಿದೆ.

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡಲಿ ಬಡವನಯ್ಯ
ಎನ್ನ ಕಾಲೇ ಕಂಬ ದೇಹವೇ ದೇಗುಲ
ಶಿರಹೊನ್ನ ಕಳಸವಯ್ಯ

ಎಂಬ ವಚನದಲ್ಲಿ, ನಮ್ಮ ತನುವನ್ನು ನಾವು ಯಾವ ಮಟ್ಟದಲ್ಲಿ ಕಾಯ್ದಿರಿಸಿಕೊಳ್ಳಬೇಕೆಂಬ ಅಮೋಘ ಸೂಚನೆಯೇ ಅಡಕವಾಗಿದೆ. ಇಂಥ ಉತ್ತಮಿಕೆ, ಪಾವಿತ್ರ್ಯ, ಲಭ್ಯವಾದಾಗ "ಜಗವ ಸುತ್ತಿಹುದು ನಿನ್ನ ಮಾಯೆಯಯ್ಯ, ನಿನ್ನ ಸುತ್ತಿಹುದು ಎನ್ನ ಮಾಯೆ ನೋಡಯ್ಯ, ಕರಿಯು ಕನ್ನಡಿಯೊಳಗೆ ಅಡಗಿರುವಂತೆ, ಎನ್ನೊಳಗೆ ನೀ ಅಡಗಿಹೆಯಯ್ಯ'' ಎಂಬ ಸವಾಲನ್ನೇ ಭಕ್ತನಾದವನು ದೈವಕ್ಕೆ ಹಾಕಬಹುದೆಂಬುದೂ ಇವರ ಆತ್ಮ ವಿಶ್ವಾಸ. ಇಷ್ಟೆಲ್ಲಾ ಸಾಧಿಸಿದ ಈ ಭಕ್ತಾಗ್ರೇಸರರು ಬಯಸುವುದಾದರೂ–

ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ
ನಿಮ್ಮ ಚರಣ ಕಮಲದೊಳಗಾನು ತುಂಬಿ

ಎಂಬ ದೈವ ಸಾಯುಜ್ಯವನ್ನೇ ಹೊರತು ಅನ್ಯವನ್ನಲ್ಲ. ಅದನ್ನು ಮತ್ತೂ ಸ್ಪಷ್ಟವಾಗಿ–

ಬ್ರಹ್ಮ ಪದವಿಯನೊಲ್ಲೆ, ವಿಷ್ಣು
ಪದವಿಯ ನೊಲ್ಲೆ
ರುದ್ರಪದವಿಯ ನೊಲ್ಲೆ
ಮತ್ತಾವ ಪದವಿಯ ನೊಲ್ಲೆನಯ್ಯ
ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾ
ಪದವಿಯನೆ ಕರುಣಿಸಯ್ಯ

ಎಂದು ನಿರ್ವ್ಯಾಜ್ಯನಿರ್ವ್ಯಾಮೋಹದ ಜೊತೆಗೆ, ಮೋಕ್ಷಾರ್ಥಿಯಾಗಿರುವುದನ್ನೂ ನಾವಿಲ್ಲಿ ಕಾಣಬಹುದು. ಅವರ ಬದುಕಿನ ಏಕೈಕ ಗುರಿ, ಸಾಧನೆ, ಏನಾಗಿತ್ತೆಂಬುದನ್ನು–

ಕರ್ಮಾವಲಂಬಿನಃ ಕೇಚಿತ್ !
ಕೇಚಿತ್ ಜ್ಞಾನಾವಲಂಬಿನಃ
ವಯಂತು ಶಿವಭಕ್ತಾನಾಂ !
ಪಾದರಕ್ಷಾವಲಂಬಿನಃ

ಎಂಬ ಅವರ ವಚನ ಮನೋಜ್ಞವಾಗಿ ಚಿತ್ರಿಸುತ್ತದೆ. ಹೀಗೆ ಬಸವಣ್ಣನವರು ಅನೆ ತುಳಿದದ್ದೇ ಹಾದಿ ಎಂಬಂತೆ, ನುಡಿದಂತೆ ನಡೆ, ನಡೆದಂತೆ ನುಡಿ ಎಂಬ ಪ್ರಾಮಾಣಿಕತೆಯಿಂದ ತನ್ನನ್ನೂ, ತನ್ನೊಂದಿಗೆ ತನ್ನ ಸಮಾಜವನ್ನೂ ಉತ್ತಮ ಆದರ್ಶದೆಡೆಗೆ ಒಯ್ಯಲು ಪ್ರಯತ್ನಿಸಿದ ಓರ್ವ ಸಮಾಜ ಸುಧಾರಕರಾಗಿ, ನಿರಹಂಕಾರಿಗಳಾಗಿ ನಡೆದು ಮೆರೆದು ಭಕ್ತಿ ಭಂಡಾರಿಯೇ ಆಗಿ ಶೋಭಿಸಿದವರು.

ವ್ಯಕ್ತಿಯಾದವನು ಸಮಾಜದಲ್ಲಿ ಬದುಕನ್ನು ಸಾರ್ಥಕಮಾಡಿಕೊಳ್ಳುವ ಬಗ್ಗೆ ಅವರು ಹೇಳಿರುವ–

ಕಳಬೇಡ, ಕೊಲಬೇಡ, ಹುಸಿಯ
ನುಡಿಯಲು ಬೇಡ
ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸ
ಬೇಡ, ಇದಿರ ಹಳಿಯಲು ಬೇಡ
ಇದೇ ಅಂತರಂಗಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮದೇವನ
ನೊಲಿಸುವ ಪರಿ

ಎಂಬ ಮಾತುಗಳಂತೂ ಮಾನವನ ನಡವಳಿಕೆಗೆ ಉತ್ತಮ ಕೈಪಿಡಿಯಾದಿವೆ.

ಹೊಗಳಿಕೆಯು ಮಾನವನನ್ನು ಅತ್ಯಂತ ಹರ್ಷಚಿತ್ತನನ್ನಾಗಿಸುತ್ತದೆಂಬುದೇನೋ ನಿಜ. ಆದರೆ ಅದರ ತಾತ್ಕಾಲಿಕತೆಯನ್ನೂ, ಅದರ ಹಿನ್ನೆಲೆ ಹಾಗೂ ಅದರಿಂದಾಗುವ ಭೀಕರ ಪರಿಣಾಮವನ್ನೂ ಬಸವಣ್ಣನವರು 'ಎನ್ನವರು ಎನ್ನನು ಹೊಗಳಿ ಹೊಗಳಿ ಹೊನ್ನ ಶೂಲಕ್ಕೆರಿಸಿದರಯ್ಯಾ' ಎಂಬಲ್ಲಿ ವಿಶ್ಲೇಷಿಸುವುದರ ಜೊತೆಗೆ, ನಾವು ಹಿಗ್ಗದೆ, ಕುಗ್ಗದೆ, ಹೇಗೆ ಸ್ಥಿತಪ್ರಜ್ಞರ ಹಾಗಿರಬೇಕೆಂಬುದನ್ನೂ ಸೂಚಿಸಿದ್ದಾರೆ.

ಬಸವಣ್ಣನವರ ದೃಷ್ಟಿಯಲ್ಲಿ ಜೀವನವೂ ಒಂದು ಲಲಿತ ಕಲೆಯಾಗಿದ್ದಿರಬೇಕು. ಅವರದು ದೈವದಿಂದಲೇ ವ್ಯಕ್ತವಾಗಿ, ದೈವಕ್ಕೆ ವಿಕಾಸಲಾಗಿರಲಿ ಎಂಬ ಭಾವ ಅವರದು. ಹಾಗಾಗಿ–

ಎನ್ನ ಕಾಯವ ದಂಡಿಗೆಯ ಮಾಡಯ್ಯ ತಂದೆ
ಎನ್ನ ನರವ ತಂತಿಯ ಮಾಡಯ್ಯ
ಎನ್ನ ಬೆರಳ ಕಡ್ಡಿಯ ಮಾಡಯ್ಯ
ಬತ್ತೀಸ ರಾಗವ ಹಾಡಯ್ಯ

ಎಂದೇ ಬೇಡಿದ್ದಾರೆ. ಇಂತಹ ಸಂಸ್ಕಾರಯುತ, ಸಹೃದಯತೆ ಇದ್ದಲ್ಲಿ ಮಾನವನ ಬದುಕು ರಾಗ ದ್ವೇಷಗಳಿಗೆ, ಹಮ್ಮು ಬಿಮ್ಮುಗಳಿಗೆ, ಒಳಗಾಗದೆ, ಸದಾಚಾರ ಸಂಪನ್ನತೆ ಹಾಗೂ ಸುಜ್ಞಾನದೊಂದಿಗೆ ಕೂಡಿ ಸಮಾಜದಲ್ಲಿ ಸಹನೆ ಹಾಗೂ ತೃಪ್ತಿಯಿಂದ ನಡೆಯಬಲ್ಲದು. ಹಾಗಿದ್ದಾಗಲೂ ಕೆಲವೊಮ್ಮೆ (ಮಾನವನು) ವ್ಯಕ್ತಿಯು ಇತರರ ಕೋಪಕ್ಕೆ, ದ್ವೇಷಕ್ಕೆ, ಕೊಂಕುನುಡಿಗೆ ಒಳಗಾಗಬಹುದು. ಆಗ ಸಹಜವಾಗಿಯೇ ಮಾನವನು ಮುಗಿಯುವುದು, ದುಃಖಿಸುವುದು ಸಹಜ. ಆದರೆ ಆ ರೀತಿಯ ನಡವಳಿಕೆ ಸಲ್ಲದೆನ್ನುತ್ತಾರೆ ಬಸವಣ್ಣನವರು. ಅದನ್ನೇ–

ತನಗೆ ಮುನಿವವರಿಗೆ ತಾಮುನಿಯ ಲೇಕಯ್ಯ
ತನಗಾದ ಆ ಕೇಡು ಅವರಿಗಾಗಲೇಕಯ್ಯ
ತನುವೊಳಗಣ ಕೋಪ ತನ್ನಯ
ಹಿರಿತನದ ಕೇಡು
ಮನದೊಳಗಣಾ ಕೋಪ ತನ್ನ
ರೂಪಿನಾ ಕೇಡು
ಮನೆಯೊಳಗಣಾ ಕಿಚ್ಚು ಮನೆಯ ಸುಟ್ಟಲ್ಲದೆ,
ನೆರಮನೆಯ ಸುಡಬಲ್ಲದೆ ಕೂಡಲ
ಸಂಗಮದೇವಾ

ಎಂಬ ಸಚಿತ್ರ ವಿವರಣೆಯೊಂದಿಗೆ ಮನದಟ್ಟು ಮಾಡಿಕೊಟ್ಟಿದ್ದಾರೆ.

ಹೀಗೆ ಬಸವಣ್ಣನವರು ಲೌಕಿಕ ಅನುಭವ, ಮತ್ತು ಅಲೌಕಿಕ ಅನುಭಾವಗಳನ್ನು ತಮ್ಮ ವಚನಗಳಲ್ಲಿ ಛಟ್ಟಿ ಇಳಿಸುವುದರ ಮೂಲಕ ವಿಶ್ವದ ತಮಸ್ಸನ್ನೂ ಕಳೆಯಲು ಸಾಧ್ಯವಾಗುವಂತಹ ಜ್ಯೋತಿಸ್ವರೂಪರಾಗಿದ್ದಾರೆಂದರೆ ಅತಿಶಯೋಕ್ತಿ ಇಲ್ಲ.

★

తిరుమల తిరుపతి దేవస్థానములు

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ಗರುಡಾದ್ರಿನಗರ ಕಾಟೇಜುಗಳು

ಪ್ರತಿ ಅಂತಸ್ತಿನಲ್ಲೂ 4 ಸೂಟ್‌ಗಳಿರುವಂತೆ ಎರಡು ಅಂತಸ್ತುಗಳ 18 ಕಾಟೇಜುಗಳನ್ನು ತಿ.ತಿ.ದೇ. ನಿರ್ಮಿಸುತ್ತಿದೆ.

* ಪ್ರತಿ ಸೂಟ್ ಸಹ 10'×12' ಗಳ ಒಂದು ಕೋಣೆ ಹಾಗೂ ಹೊಂದಿಕೊಂಡ ಶೌಚಗೃಹ, ಸಾಮಾನ್ಯ ವೆರಾಂಡಾವನ್ನು ಹೊಂದಿರುತ್ತದೆ.

* 30000 ರೂಗಳ ದಾನದಿಂದ ಒಬ್ಬರು 320 ಚದರಡಿ ಪ್ಲಿಂತ್ ಏರಿಯಾದ ಒಂದು ಸೂಟನ್ನು ತಮ್ಮ ಹೆಸರಿನಲ್ಲಿ ಕಟ್ಟಿಸಬಹುದು. ಅಪೇಕ್ಷೆಪಟ್ಟಲ್ಲಿ 8 ಸೂಟ್‌ಗಳ ಇಡೀ ಕಾಟೇಜನ್ನು 2.4 ಲಕ್ಷ ರೂಗಳ ದಾನದ ಮೂಲಕ ಅಥವಾ 4 ಸೂಟ್‌ಗಳನ್ನು 1.2 ಲಕ್ಷ ರೂಗಳ ದಾನದ ಮೂಲಕ ಅಥವಾ 60000 ರೂಗಳ ದಾನದ ಮೂಲಕ 2 ಸೂಟ್‌ಗಳನ್ನು ನಿರ್ಮಿಸಬಹುದು.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.

* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು.

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.

* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ.

* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.

* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

(16ನೇ ಪುಟದಿಂದ)

ಸ್ವರೂಪ ನಿರೂಪಕಧರ್ಮ–ತಟಸ್ಥ ಲಕ್ಷಣವಲ್ಲ ಎಂಬುದೇ ಈ ನಿರ್ಧಾರಕ್ಕೆ ಮೂಲಾಧಾರ. "ಶ್ರೀಯಃ ಪತಿತ್ವ ನಿಮಿತ್ತವಾಗಿ ಗೋಚರವಾಗಬಲ್ಲ ಈಶ್ವರನ ಹಿರಿಮೆಯನ್ನು ತೋರಿಸಿಕೊಡುವ ಹಂತಗಳು ಮೊದಲಾಗಿ 'ಅವಾಪ್ತ ಸಮಸ್ತ ಕಲ್ಯಾಣ ಗುಣಾತ್ಮಕತ್ವ' ಆ ಕಾರಣದಿಂದಾಗಿ ಸಮಸ್ತ ಕಾಮುತ್ವದಲ್ಲಿ ಅವಾಪ್ತತೆ ಇರುವುದರಿಂದ ಲೋಪಕ್ಕೆ ಎಳ್ಳಷ್ಟೂ ಎಡೆ ಇಲ್ಲ. ಅದ್ದರಿಂದ ಕಲ್ಯಾಣಗುಣಗಳು ಕೇವಲ ಪರಪ್ರಯೋಜನಕ್ಕಾಗಿ, ಪರಗತ ವೈಕಲ್ಯ ನಿವಾರಣೆಗಾಗಿ. ಆದರೆ ಸರ್ವೇಶ್ವರನ ಹಿಂದಿನ ಮೂರು ವಿಶೇಷಣಗಳಿಗೆ ಒಳಪಟ್ಟು, ಅವುಗಳ ಸಹಾಯದಿಂದ ಸರ್ವೇಶ್ವರತ್ವವನ್ನು ಉಳಿಸಿಕೊಂಡಿಲ್ಲ. ಅವುಗಳು ತಮ್ಮ ಸ್ವರೂಪವನ್ನು ಉಳಿಸಿಕೊಳ್ಳುವುದಕ್ಕಾಗಿ ಅವನಲ್ಲಿ ಆಶ್ರಯವನ್ನು ಪಡೆಯುತ್ತವೆ. ಇದರ ಪ್ರಕಾರ "ನಲಮುಡೈಯವ್ ಎವ್'' ಎಂಬ ಪದಗಳಿಂದ ಗುರುತಿಸಬಹುದಾದ "ಎವ್" ಎಂಬ ಸರ್ವೇಶ್ವರ ತತ್ತ್ವದ ವೈಲಕ್ಷಣ್ಯವನ್ನು ಸುಲಭವಾಗಿ ಅರಿಯಬಹುದು. ಮೊದಲನೆಯದಾಗಿ "ಗುಣ" ವಿಶಿಷ್ಟವೇಷ. ಎರಡನೆಯದಾಗಿ ಗುಣ ನಿರಪೇಕ್ಷ ಪ್ರಸಿದ್ಧಿ. ಈ ರೀತಿ ಅಲ್ಲದಿದ್ದರೆ ಸರ್ವೇಶ್ವರತ್ವಕ್ಕೆ ಸ್ವನಿಷ್ಠವಾದ ಪಾರಮ್ಯಸಿದ್ಧಿ ಸುವುದೇ ಇಲ್ಲ. ಹಾಗಾದರೆ ಈ ವಿಶೇಷಣಗಳ ಪ್ರಯೋಜನವಾದರೂ ಏನಿರಬಹುದು–ಎಂಬ ಶಂಕೆ ಮೂಡಿದರೆ, ಲೀಲಾಪೂರ್ವಕ ಭೋಗವೈಭವವನ್ನು ಪ್ರಕಟಿಸುವುದಕ್ಕಾಗಿ ಎಂಬ ಏಕಮಾತ್ರಧ್ಯೇಯ. ಅದು ಭೋಗ ಸಹಜವಾದುದು. ಯಾವವಿಷಯದಲ್ಲೂ ವೈಕಲ್ಯದ ಸ್ಪರ್ಶ ಕಾಣುವುದಿಲ್ಲ. ಅಂತಹ ಸನ್ನಿವೇಶದಲ್ಲಿ ವಿಭುತ್ವವಾದ ಸರ್ವೇಶ್ವರನೊಡನೆ ಸೇರಿಕೊಂಡಿರುವ ಸಮಸ್ತವಸ್ತುಗಳಿಗೂ ಸೇರಿದುದು. ಅದರಲ್ಲಿ ವೈಕಲ್ಯವಿಲ್ಲದಿದ್ದರೆ ಭೋಗಾವಸ್ಥೆ ವೈಭವ ಪ್ರಕಾಶಕ ಪದಾರ್ಥಗಳಲ್ಲಿ ವೈಕಲ್ಯ ತೋರದೇ ಇರುವುದಿಲ್ಲ. ಅದು ಭೋಗಭಾಸ, ಆ ಆಭಾಸಕ್ಕೆ ಕಾರಣನಾದವನು ಸರ್ವೇಶ್ವರನೇ. ಅದುದರಿಂದ ನಿತ್ಯನೂ ಏಕರೂಪನೂ ಆದ ಸರ್ವೇಶ್ವರನು ವೈಭವ ಪ್ರಕಾಶಕ ವಸ್ತುಗಳಲ್ಲಿ ವಿನೋದಕ್ಕಾಗಿ ಸಹಜ ದಾಸ್ಯಸ್ವಭಾವದೊಡನೆ ಸ್ವಾತಂತ್ರ್ಯವನ್ನು ಕಲೆಸಿ ಮಿಶ್ರಸ್ವಭಾವವನ್ನು ಏರ್ಪಡಿಸಿ ಭೋಗಾಭಾಸವನ್ನು ಅನುಭವಿಸುತ್ತಾನೆ. ಈ ಹೀನಾವಸ್ಥೆಗೆ ಈಶ್ವರನೇ ಕಾರಣನಾಗಿರುವುದರಿಂದ ಅದರ ಪರಿಹಾರಕ್ಕೂ ಅವನೇ ಒಡೆಯ. ಈ ಒಡೆತನವನ್ನು ಪ್ರಕಾಶಪಡಿಸುವುದಕ್ಕೆ 'ಯತೋವಾ ಇಮಾನಿ ಭೂತಾನಿಜಾಯಂತೇ' ಎಂಬ ಶ್ರುತಿವಾಕ್ಯಕ್ಕನುಗುಣವಾಗಿ ಭ್ರಮೆಯಕಾರಕನೂ ಭ್ರಮೆಯ ನಿವಾರಕನೂ ಈಶ್ವರನೇ ಆಗುತ್ತಾನೆ. ಮಂಕುಂಟಾದಾಗ ಏರ್ಪಡುವ ಕಳವಳ ಕಳೆಯಬೇಕಾದರೆ ಅದಕ್ಕೆ ವೈಭವ ಕೋಟಿಯಲ್ಲಿ ಸೇರಿಕೊಂಡಿರುವ ವಸ್ತುಗಳು ಕಾರಣವಾಗಲಾರವು. ಆದರೆ ಕೇವಲ ಉಪಕರಣ ಸ್ಥಾನವನ್ನು ಹೊಂದುತ್ತದೆ. ಕರ್ಮವನ್ನು ಕಾರಣವಾಗಿ ಇಟ್ಟುಕೊಂಡು ಕರ್ಮ ವಿನಾಶಕ್ಕೆ ಈಶ್ವರನ ಸಹಾಯ ಅಪೇಕ್ಷಿಸುವುದು ಅಸಮಂಜಸ. ಕರ್ಮ ಸಂಪರ್ಕದ ಮೂಲ ಸ್ಪಷ್ಟಪಡಬೇಕು. ಅದು ಈಶ್ವರ ಕೃತವಲ್ಲದಿದ್ದರೆ ಅವನಿಗೆ ಔದಾಸೀನ್ಯ ಎಂಬ ದೋಷ ಏರ್ಪಟ್ಟು, ಅಮೂಲಕವಾಗಿ ವೈಷಮ್ಯ ನೈರ್ಘೃಣ್ಯ ತಪ್ಪುವುದೇ ಇಲ್ಲ. ವಿನೋದಾರ್ಥವಾಗಿ ಕರ್ಮ ಪ್ರವೇಶ ಅಂಗೀಕೃತವಾದರೆ ಪ್ರತಿವ್ಯಕ್ತಿಯಲ್ಲೂ ಕರ್ಮಸಂಬಂಧವಾದ ದೋಷವೂ ದಾಸ್ಯ ವಿರೋಧವಾದ ದೋಷವೂ ಇರುವುದರಿಂದ, ದೋಷ ಬಗೆ ಬಗೆಯಾಗಿರುವುದರಿಂದ, ಕರ್ಮ ವೈಷಮ್ಯವಿರುವುದಿಲ್ಲ. ಕರ್ಮವೈವಿಧ್ಯ ಏರುತ್ತದೆ. ವೈವಿಧ್ಯದ ಪರಿಣಾಮವಾಗಿ ನೈರ್ಘೃಣ್ಯವೂ ತೋರುವುದಿಲ್ಲ. ಅಂದ ಮೇಲೆ ಪೃಥಕ್ ಭಾವನೆ ಏರ್ಪಟ್ಟು, ಅದರ ಪ್ರಭಾವದಿಂದ ಸಂಭವಿಸುವ ವಿವಿಧ ಕ್ಲೇಶಗಳ ಮೂಲಕ ವೈಭಾವಾಂತರ್ಗತ ವಸ್ತುಗಳು ಕಂಗೆಟ್ಟು ಸ್ವಯಂ ನಿರ್ವಹಣೆಗೆ ಅಯೋಗ್ಯವೆಂದು ಭಾವನೆ ತುಂಬಿದಾಗ "ಔಪಾಧಿಕ" ಸಂಪರ್ಕದಿಂದ ಪಾರತಂತ್ರ್ಯ ತಲೆ ಎತ್ತಿದಾಗ ನೆರವಾಗುವುದಕ್ಕೆ ಲೀಲಾಪ್ರವೃತ್ತನಾದ ಈಶ್ವರನು ಮೋಕ್ಷ ಪ್ರವರ್ತಕನಾಗಿ ದೋಷಗಳನ್ನು ಪರಿಹರಿಸಿ ನಿಜ ಸ್ವರೂಪವನ್ನು ಅನುಗ್ರಹಿಸಿ ಭೋಗಕ್ಕೆ ಈಡು ಮಾಡಿ ಕೊಳುತ್ತಾನೆ. ಅವನೇ ರಕ್ಷಕನಾದುದರಿಂದ ಆರೋಹಣಕ್ರಮದಲ್ಲಿ ಉತ್ತಾರಕವರ್ಗದಲ್ಲಿ ಸೇರಿಕೊಂಡು ಸಾರ್ಥಕ್ಯವನ್ನು ಕೊನೆಗಾಣಿಸಿ ವಿಶೇಷವನ್ನಾಗಿ ತನ್ನ ಭೋಗಕ್ಕೆ ಬಳಸಿಕೊಳ್ಳುವ ಸಂಕಲ್ಪ ಪರಮೇಶ್ವರನಿಗೆ ಮೀಸಲಾದುದು. ಆಕಾರಣದಿಂದ ಸರ್ವೇಶ್ವರತ್ವ ತನ್ನ ಸರ್ವ ಪರಾಧೀನತ್ವವನ್ನು ಪ್ರದರ್ಶನಮಾಡಿ ತನ್ಮೂಲಕ ಪೃಥಕ್ ಭೂತನಾದವರನ್ನು "ಅಪೃಥಕ್ತ್ವ ಭೂಷಿತ"ರನ್ನಾಗಿ ಮಾಡಲು ಕೈಗೊಳ್ಳುವ ಮಾರ್ಗ ಲೀಲಾವಿಭೂತಿಯಲ್ಲಿ ಅವತಾರ ಭಾಗಕ್ಕೆ ಸೇರಿದ ಪರಮಾತ್ಮನ ವ್ಯಾಪಾರವಿಶೇಷ. ಇದು ಅವರೋಹಣ ಮಾರ್ಗ. ಸರ್ವೇಶ್ವರ ಕಲ್ಯಾಣಗುಣವನ್ನು ಮುಂದೂಡುತ್ತಾನೆ. ಅದು ಸ್ವಾರ್ಥವಲ್ಲ, ಗುಣನಿರಪೇಕ್ಷತೆಯನ್ನು ಸೂಚಿಸುವ ಅವಾಪ್ತ ಸಮಸ್ತ ಕಾಮತ್ವವನ್ನು ವ್ಯಕ್ತಪಡಿಸುತ್ತದೆ. ಅದರ ಫಲವಾಗಿ ಅವನು ಬಿಡಲಾರದ ಅತಿಶಯವನ್ನು ಶ್ರೀದೇವಿಯಲ್ಲಿ ಪ್ರಕಟ ಪಡಿಸುತ್ತಾನೆ. ಈ ಶ್ರೀದೇವಿಯು ಈಶ್ವರನ ಕಾರುಣ್ಯಾತಿಶಯವನ್ನು ವ್ಯಕ್ತಪಡಿಸುತ್ತಾಳೆ. ಕಾರುಣ್ಯವೆಂದರೆ ಪರಗತ ದುಃಖವನ್ನು ಕಂಡು ತಟಸ್ಥವಾಗಿ ಉಳಿಯಲಾರದ ಸಯಂ ಕೃತಾಪರಾಧಕ್ಕೆ ಪರಿಹಾರ ಸೂಚಕವಾದ ಧರ್ಮವಿಶೇಷ. ಅದ್ದರಿಂದ ಶ್ರೀದೇವಿಯು ತತ್ತ್ವವನ್ನರಿತವರು ಅವಳನ್ನು ಘಟಕ ಸ್ಥಾನದಲ್ಲಿ ನಿರಗೊಳಿಸಿ ವಿಶ್ಲೇಷನಿವಾರಣೆಗೆ ಬೀಜಭೂತಳೆನ್ನುವುದು ವ್ಯಕ್ತವಾಗುತ್ತದೆ. ಶ್ರೀದೇವಿಗೆ ಪ್ರಣವದಲ್ಲಿರುವ ಉಕಾರ ವಾಚಕವಾಗುತ್ತದೆ, "ಶ್ರೀಯ್ ಜ್ಞಾತಂತು ಸಂತಾನೇ'' ಎಂಬ ಧಾತುವಿನಿಂದ ನೂಲು ಜೋಡಿಸುವಿಕೆ ಅರ್ಥವಾಗುತ್ತದೆ. ಅಂತೆಯೇ 'ವಹ ಪ್ರಾಪಣೇ' ಎಂಬ ಧಾತುವಿನಿಂದ ವೈಭವಗತ ಪದಾರ್ಥಗಳನ್ನು ವಿಭುಪದಾರ್ಥದ ಕಡೆಗೆ ಹರಿಸುವುದು ವ್ಯಕ್ತ ಪಡುವುದರಿಂದ 'ಅಪೃಥಕ್ತ್ವ ಸಿದ್ಧಿ' ಪ್ರಧಾನವಾದುದು ಮತ್ತು ಅದರ ಸಿದ್ಧಿಗೆ ಪೃಥಕ್ತ್ವ ನಿರಾಕರಣೆ ಸ್ವರೂಪವಾನು ಗುಣವಾಗಿ ವಿಭುತ್ವವಸ್ತುವಲ್ಲೂ ವೈಭವಪದಾರ್ಥದಲ್ಲಿ ಗ್ರಾಹ್ಯತ್ವ ವಿರುದ್ಧವಾದ ಗ್ರಾಹಕತ್ವ ನೀಗಬೇಕು. ಈ ಅಂಶವನ್ನು ಕೂರೇಶರು ಗುರು ಪರಂಪರೆಯ ಅವರೋಹಣ ಕ್ರಮದಲ್ಲಿ ಸ್ಪಷ್ಟ ಪಡಿಸಿದ್ದಾರೆ. ಶ್ರೀದೇವಿಯ ವ್ಯಾಪಾರದಲ್ಲಿ ನಿಯೋಜಿತವಾದ ವ್ಯಕ್ತಿಗಳೇ ನಿರ್ವಹಣೆಯಲ್ಲಿ ಆಚಾರ್ಯ ಪಂಕ್ತಿ ಶಿಷ್ಯ ಭಾವನೆಯಲ್ಲಿ ತನ್ನ ಸಾಕ್ಷಾತ್ ಗುರು. ಈ ಪಂಕ್ತಿಯಲ್ಲಿ ಪ್ರತ್ಯಕ್ಷಲಬ್ಧವಾದ "ಘಟಕ'' ಪದಾರ್ಥ ಎಂದು ತೋರುತ್ತದೆ. ಈ ತಾತ್ಪರ್ಯವನ್ನೊಳಗೊಂಡ ಶ್ಲೋಕ ಸಾರ್ವತ್ರಿಕ. "ಲಕ್ಷ್ಮೀನಾಥ ಸಮಾರಂಭಾಂ ನಾಥಯಾಮುನ ಮಧ್ಯಮಾಂ। ಅಸ್ಮದಾಚಾರ್ಯ ಪರ್ಯಂತಾಂ ವಂದೇ ಗುರುಪರಂಪರಾಂ''॥ ಲಕ್ಷ್ಮೀಪತಿ ಮೊದಲಾಗಿ ನಾಥಯಾಮುನರ ಮೂಲಕ ಸಾಕ್ಷಾತ್ ಆಚಾರ್ಯರು ಶಿಷ್ಯನ ಯೋಗಕ್ಷೇಮಕ್ಕೆ ನಿರ್ವಾಹಕರು ಎಂದು ಏರ್ಪಡುತ್ತದೆ. ಆರೋಹಣ ಕ್ರಮದಲ್ಲಿ ಪರತ್ತ್ವ ಸಾಕ್ಷಾತ್ ಗುರುವಿನಲ್ಲಿ ಪ್ರಕಾಶವಾಗುವುದಿಲ್ಲ. ಅವರೋಹಣ ಕ್ರಮದಲ್ಲಿ ಸಾಕ್ಷಾತ್ ಗುರುವನ್ನು ಬಿಟ್ಟರೆ ನಿರ್ವಹಣೆ ಕೈಬಿಡುತ್ತದೆ. ಇದೇ ಉಭಯ ವೇದಾಂತಗಳಲ್ಲಿ ತೋರಿ ಬರುವ ವಿಮರ್ಶೆ. ದರ್ಶನದಲ್ಲಿ ಸರ್ವೇಶ್ವರನೇ ಕೊನೆಯ ಹಂತ, ನಿರ್ವಹಣೆಯಲ್ಲಿ ಸ್ವಾಚಾರ್ಯನೇ ಸಮರ್ಥತಮ.

ಈ ವೈಲಕ್ಷಣ್ಯ ವಿಶಿಷ್ಟನಾದ ಸರ್ವೇಶ್ವರನು "ಕಟಾಕ್ಷಂ ಪಣ್ಣಿ ಅರುಳಿನ್ನ್'' ಅಂದರೆ ತನ್ನ ಕೃಪೆಯನ್ನು ಬೀರಿದನು ಎಂದು ಅರ್ಥ. ಈ ಕೃಪೆ, ಸಂಘಟನೆಗಾಗಿ. ತಾನೇ ಏರ್ಪಡಿಸಿದ ವಿಘಟನೆಯ ನಿವಾರಣಕ್ಕಾಗಿ. ಅದ್ದರಿಂದ ಅನಾದಿ ಕರ್ಮ ಲೀಲಾನಿಮಿತ್ತವಾಗಿ ಈಶ್ವರನು ಕೈಗೊಂಡ ಕಾರ್ಯ "ಮತ್ಕರ್ಮ'' ಎಂಬುದು ಆಪಾತ ಸಮಾಧಾನ. 'ಪಾವಿಯೇನೈ ಪಲನೀಕಾಟ್ಟಿಪ್ಪಡಿತ್ತಾಯೋ?' ಎಂಬೀ ವಾಕ್ಯಗಳು ಮೇಲೆ ಹೇಳಿದ ಭಾವವನ್ನು

ಊರ್ಜಿತಪಡಿಸುತ್ತವೆ. ಲೀಲಾನಿಮಿತ್ತ ಸ್ವಕೃತ ಲೀಲಾಜನಿತ ವಿಷಮಾವಸ್ಥೆ ನೀಗಲು ತಾನೇ ಕೃಪೆಯನ್ನು ಬೀರುತ್ತಾನೆ. ಪೂರ್ವಾಚಾರ್ಯರು ಪರಿಶೋಧಕರು, ಜ್ಞಾನಿಗಳು. ಲೀಲಾವಿಭೂತಿಯ ಅನುಭವ ವೈಚಿತ್ರ್ಯ ನಿತ್ಯವಿಭೂತಿಯ ಅನುಭವವನ್ನು ಮೀರಿಸಬಲ್ಲದು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಶ್ರೀವೇಂಕಟೇಶ್ವರನ ಸನ್ನಿಧಿಯಲ್ಲಿ ಈ ಅಂಶವನ್ನು ಮನಗಾಣಬಹುದೆಂದು ಪರಿಗಣಿಸಲಾಗಿದೆ. "ಪೂರ್ಣಮದಃ" ಎಂಬ ಉಪನಿಷದ್ವಾಕ್ಯ ಈಶ್ವರ ವಿಷಯದಲ್ಲಿ ನ್ಯೂನಾತಿರೇಕಗಳನ್ನು ತೋರಿಸುವುದಿಲ್ಲ. ಆದರೆ ಅವತಾರದ್ವಾರಾ ಅನಾವಿಷ್ಕೃತ ಗುಣಗಳಿಗೆ ಅವಕಾಶ ಏರ್ಪಡುವುದು. ಸಾಂಸಾರಿಕ ಪ್ರಪಂಚದಲ್ಲಿ ತೋರುವುದರಿಂದ ಸಂಸಾರದಲ್ಲಿ ಭಗವತ್ಕಟಾಕ್ಷಪಾತ್ರಭೂತನಾದವನು ವಿಲಕ್ಷಣತಮ ವ್ಯಕ್ತಿ ಎಂದು ಏರ್ಪಡುತ್ತದೆ. ಆ ವ್ಯಕ್ತಿಯೇ "ನಮ್ಮಾಳ್ವಾರ್" ಎಂಬ ಅನುಪಮವಸ್ತು. ಸರ್ವೇಶ್ವರನ ಕೃಪೆಯಪ್ರಭಾವ ಕೃಪಾಪಾತ್ರ ಭೂತರಾದ ನಮ್ಮಾಳ್ವಾರರಲ್ಲಿ ಸ್ವಲಾಭ ಅತಿಶಯವನ್ನು "ಶೊಲ್ಲವಲ್ಲರಾಂಪಡಿ" ಎಂಬ ಪದದಿಂದ ವೇದ್ಯವಾಗುತ್ತದೆ. ಇವನ್ನು ಎರಡು ಕ್ರಮಗಳಿಗೂ ಬದ್ಧಪಟ್ಟುದುದು. ಆದರೆ ವೈಲಕ್ಷಣ್ಯ ತೋರುವುದು ಒಂದೇ ಒಂದು ಅಂಶದಲ್ಲಿ– "ಮುದಲೀೕ, ಮುದಲಡಿಯಲೇ" ಎಂಬ ಪದಗಳು ಆರೋಹಣ ಕ್ರಮದಲ್ಲಿ ಅನ್ವಿತವಾಗುವುದಿಲ್ಲ. ಅವರೋಹಣ ಕ್ರಮದಲ್ಲಿ ಅದೇ ಪುರುಷಾರ್ಥ ಬೀಜ. ಲೀಲೆಗೆ ಯಾರು ಕಾರಣನೋ ಅವನೇ ಭೋಗಕ್ಕೂ ಏಕೈಕಕಾರಣ. ತ್ರಿವಿಧಕಾರಣವೂ ಈಶ್ವರನೇ ಆಗಿರುವುದರಿಂದ ಉಭಯವಿಧ ನಿರ್ವಹಣೆಯಲ್ಲೂ ಜೀವಾತ್ಮನಿಗೆ ಕರ್ತೃತ್ವಭಾವನೆಗೆ ಅವಕಾಶವೇ ಇಲ್ಲ. ★

(14ನೇ ಪುಟದಿಂದ)

ಮನನ ಕಮಲವೂರ ಮಲರ್ಮಿಶೈಯೊಳು
ತರುಂ ಮನಪುಣರ್ನ್ದೊಳಿರ್ಪ್ಪೊಳಿಯುಣ
ರ್ವೈಯಿಲನ್॥ ಇನಬುಣರ್ ಮುಳನಲ
ಮುದಿರ್ಸಿಕಳ್ ಕಳಿವಿನುಂ। ಇನಸಿಲ ನೆಪ
ಮಯರ್ ಮಿಕುವೈಯುಂನೇ॥

ಹೇ! ಮನಸ್ಸೇ! ನಿರತಿಶಯವಾಗಿ ಹೊರ ಸೂಸುವ ಆನಂದವನ್ನು ಯಾರು ಹೊಂದಿರುವನೋ, ಅಜ್ಞಾನವು ನೀಗುವಂತೆ ಪ್ರೀತಿರೂಪಾಪನ್ನ ಜ್ಞಾನವಾದ ಭಕ್ತಿಯನ್ನು ಯಾರು ಅನುಗ್ರಹಿಸುವನೋ, ಸರ್ವಜ್ಞರಾದ ನಿತ್ಯಸೂರಿಗಳಿಗೆ ಯಾರು ಅಧಿಪತಿಯೋ, ಅಂತಹ ಪರಮಾತ್ಮನ ತೇಜೋರೂಪವಾದ, ದುಃಖ ನಾಶಕರವಾದ ಪಾದಪದ್ಮಗಳನ್ನು ಸೇವಿಸಿ ಉಜ್ಜೀವನ ಹೊಂದು. ಬಾಹ್ಯವಾದ ಅಥವ ಆಂತರ್ಯವಾದ ಇಂದ್ರಿಯಗಳಿಂದ ಪರಮಾತ್ಮನನ್ನು ತಿಳಿಯುವುದಕ್ಕಾಗುವುದಿಲ್ಲ. ಸ್ವಾಮಿಗೆ ಸಮರಾಗಲಿ ಅಥವ ಅಧಿಕರಾಗಲಿ ಯಾರೂ ಇಲ್ಲ. ಇಂದ್ರಿಯ ಗ್ರಾಹ್ಯವಾದ ವಸ್ತುಗಳ ಸ್ವಭಾವವನ್ನು ತಿಳಿಯದವನು, ಯೋಗಾಭ್ಯಾಸ ಬಲದಿಂದ ಮನಸ್ಸಿನ ದೋಷವನ್ನು ಕಳೆದುಕೊಂಡ ಮೇಲೆ, ವಿಜೃಂಭಿಸುವ ಮನೋಜ್ಞಾನದಿಂದ ಪೂರ್ಣವಾಗಿ ತಿಳಿಯುವವನು.

ಪರಮಾತ್ಮನ ಪರತ್ವವನ್ನೂ, ಸೌಲಭ್ಯವನ್ನೂ ಈ ಪಾಶುರಗಳು ಸೂಚಿಸುತ್ತವೆ. ಈ ಪದ್ಯಗಳಿಂದ ಸಿದ್ಧವಾದ ಅಂಶಗಳನ್ನು ಹೀಗೆ ಸಂಗ್ರಹಿಸಬಹುದು. ಚೇತನ, ಅಚೇತನ, ಈಶ್ವರ ಈ ಮೂರೂ ತತ್ತ್ವಗಳು. ಈಶ್ವರನು ಇತರ ತತ್ತ್ವಗಳಿಗೆ ಧಾರಕನಾಗಿರುವನು. ಚೇತನವು ಅಚೇತನಕ್ಕಿಂತ ಭಿನ್ನವಾಗಿ ವಿಲಕ್ಷಣವಾಗಿರುವುದು. ಈಶ್ವರನು ಜ್ಞಾನಾನಂದ ಸ್ವರೂಪನು. ಪರಭಕ್ತಿಯು ಪರಮಾತ್ಮನ ಅನುಗ್ರಹದಿಂದ ಲಭಿಸುವುದು. ಪರಮಾತ್ಮನಲ್ಲಿ ಶರಣಾಗತಿ ಮಾಡುವುದೇ ಮೋಕ್ಷೋಪಾಯ. ನಿತ್ಯ ವಿಭೂತಿಗಿಂತ ಪ್ರತ್ಯೇಕ.

"ಯಃ ಪೃಥಿವ್ಯಾಂತಿಷ್ಠನ್, ಯಂ ಪೃಥಿವೀ ನ ವೇದ, ಯಸ್ಯ ಪೃಥಿವೀ ಶರೀರಂ, ಯಃ ಪೃಥಿವೀಂ ಅಂತರೋಯಮಯತಿ" ಎಂಬ ಶ್ರುತಿವಾಕ್ಯವನ್ನು ತಿರುವಾಯ್ಮೊಳಿಯು ಪ್ರತಿಪಾದಿಸುತ್ತದೆ. ಇದರಿಂದ ಪರಮಾತ್ಮನ, ಸರ್ವಾತ್ಮತ್ವವನ್ನೂ, ಸರ್ವ ನಿಯಂತೃತ್ವವನ್ನೂ, ಸರ್ವಶೇಷಿತ್ವವನ್ನೂ, ಸಾರ್ವಾಧಾರತ್ವವನ್ನೂ ಮತ್ತು ಸರ್ವ ಸಾಮಿತ್ವವನ್ನೂ ಇದು ನಿರೂಪಿಸುವಂತಾಗಿದೆ.

"ಮುನಿಯೇ, ನಾನ್ಮುಕನೇ ಮುಕ್ಕಣ್ಣಪ್ಪಾ, ಎನ್ಪೊಲ್ಲಾಕ್ಕನಿವಾಯ್ ತಾಮರೈಕ್ಕಣ್, ಕರುಮಾಣಿಕ್ಕಮೇ, ಎನ್ ಕಳ್ವಾ, ತನಿಯೇ, ನಾನ್ ಉಯಿರೇ" ಎಂಬ ಮಾತುಗಳಿಂದ ಪರಮಾತ್ಮನ ಜಗತ್ಕಾರಣತ್ವ ಸರ್ವ ಅಂತರಾತ್ಮ್ಯವನ್ನು ನಿರೂಪಿಸಲಾಗಿದೆ. ಪರಮಾತ್ಮನ, ಪರತ್ವ, ಸೌಲಭ್ಯ, ಇತ್ಯಾದಿ ಗುಣಗಳನ್ನು ಇಲ್ಲಿ ಉಪದೇಶ ಮಾಡಲಾಗಿದೆ. "ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ" ಎಂಬ ಶ್ರುತಿ ವಾಕ್ಯ ರಹಸ್ಯವನ್ನು ಇಲ್ಲಿ ಪ್ರತಿಪಾದಿಸಲಾಗಿದೆ.

ಒಟ್ಟಿನಲ್ಲಿ ತಿರುವಾಯ್ಮೊಳಿಯು ಪರಮಾತ್ಮನ ಸ್ಮರಣ, ಮನನ, ಧ್ಯಾನಾದಿಗಳ ವಿಷಯವಾದ ಸ್ತೋತ್ರವಾಗಿದೆ. ಮಹಾತ್ಮರ ಅನುಭವಪೂರಿತ ಪ್ರಾರ್ಥನೆಯಾಗಿದೆ. ಇದನ್ನು ಎಷ್ಟು ಹೆಚ್ಚು ವ್ಯಾಸಂಗ ಮಾಡಿದರೆ ಅಷ್ಟು ಹೆಚ್ಚಿನ ಪ್ರತಿಫಲ ಪಡೆಯಬಹುದು. ಪರಮಾತ್ಮನ ಮಹಿಮೆ ಅಷ್ಟು ಹೆಚ್ಚು ಹೆಚ್ಚಾಗಿ ಗೋಚರವಾಗುವುದು.

---

# ತೀರ್ಥಕ್ಷೇತ್ರ ಯಾತ್ರೆ

ಭಾರತದೇಶವು ಅನೇಕ ತೀರ್ಥಕ್ಷೇತ್ರಗಳ ನೆಲೆವೀಡು. ಇಲ್ಲಿಯ ಪ್ರತಿಯೊಬ್ಬ ಹಿಂದುವೂ ತನ್ನ ಜೀವನದಲ್ಲಿ ಒಮ್ಮೆಯಾದರೂ ಪುಣ್ಯಕ್ಷೇತ್ರಗಳ ಸಂದರ್ಶನ ಮಾಡಬೇಕು ಎಂಬುದು ಎಲ್ಲರ ಅನಿಸಿಕೆ. ಆದರೆ ಈ ತೀರ್ಥಯಾತ್ರೆಯ ಕುರಿತು ಜನರಲ್ಲಿ ಈಗ ವಿಪರೀತ ಕಲ್ಪನೆಯಿದೆ. ಅದೇನೆಂದರೆ "ಅನ್ಯಕ್ಷೇತ್ರೇ ಕೃತಂ ಪಾಪಂ ಪುಣ್ಯಕ್ಷೇತ್ರೇ ವಿನಶ್ಯತಿ"ಎಂದು. ನಿಮ್ಮ ನಿತ್ಯ ಜೀವನದಲ್ಲಿ ನೀವಿರುವ ಸ್ಥಾನದಲ್ಲಿ ಬೇಕಾದ್ದು ಪಾಪಮಾಡಿರಿ. ಅದೆಲ್ಲವೂ ಪುಣ್ಯಕ್ಷೇತ್ರಗಳ ದರ್ಶನದಿಂದ; ತೀರ್ಥಾಟನೆಯಿಂದ ನಾಶವಾಗಿ, ಮತ್ತೆ ಪಾಪಮಾಡಲು ಅರ್ಹನಾಗುವನೆಂಬ ವಿಪರೀತವಾದ ಭಾವನೆಯಿಂದ ಇಂದು ತೀರ್ಥಾಟನೆಯ ಉದ್ದೇಶ ಅರ್ಥಹೀನವಾಗಿದೆ. ಆದರೆ ನಾವು ಸ್ವಲ್ಪ ಸಾವಧಾನದಿಂದ ಆಲೋಚಿಸಿದರೆ, ಈ ಕಲ್ಪನೆಯನ್ನು ಬಹಳಷ್ಟು ಹಿಂದೆಯೇ-ಪುರಾಣಗಳು ತೀರ್ಥ ಮಹಾತ್ಮೆಯನ್ನು ಹೇಳುವಾಗ-ನಿರ್ದಾಕ್ಷಿಣ್ಯವಾಗಿ ಖಂಡಿಸಲಾಗಿದೆ.

ಪರನಾರೀ, ಪರಧನಾಪಹಾರಕರಿಗೆ, ಪರಪೀಡಕರಿಗೆ ಕಾಶಿಯಲ್ಲಿ ಸ್ನಾನವಿಲ್ಲ. ಅದರಂತೆ ಅರ್ಥಾರ್ಥಿ, ಕಾಮಾರ್ಥಿ, ವೇದನಿಂದಕ ಮತ್ತು ಶಿವನಿಂದಕರಿಗೆ ಕಾಶಿಯಲ್ಲಿ ಸ್ನಾನವಿಲ್ಲ. ಈ ಮಾತನ್ನು ಈ ಕೆಳಗಿನ ಶ್ಲೋಕವು ಸ್ಪಷ್ಟಪಡಿಸುವುದು — ಅಶ್ರದ್ಧಧಾನಃ ಪಾಪಾತ್ಮಾನಾಸ್ತಿಕೋಽಚ್ಛಿನ್ನ ಸಂಶಯಃ। ಹೇತುನಿಷ್ಟಶ್ಚ ಪಂಚೈತೇ ನ ತೀರ್ಥ ಫಲ ಭಾಗಿನಃ॥ (ಕಾಶಿ — ತೀರ್ಥ 'ತೀರ್ಥ ಮಹಾತ್ಮೆಯಲ್ಲಿ ಶ್ರದ್ಧಾಹೀನನಿಗೆ, ಕ್ಷೇತ್ರ ಪ್ರಭಾವದಿಂದ ಪುಣ್ಯಭಾಗಿಯಾಗಬಹುದಾದರೂ ಸ್ವಭಾವತಃ ಪಾಪಮಯನಾದ ಪಾಪಾತ್ಮನಿಗೆ, ದೇವರ ಅಸ್ತಿತ್ವದಲ್ಲಿ ನಂಬಿಕೆಯಿಲ್ಲದ ನಾಸ್ತಿಕನಿಗೆ, ಸಂದೇಹ ಪಡುವ ಸಂದೇಹಶೀಲನಿಗೆ ಮತ್ತು ಭೌತಿಕವಾದುದನ್ನು ಮಾತ್ರವೇ ನಂಬುವ ಹೇತುವಾದಿ— ಈ ಐದು ಜನರಿಗೆ ತೀರ್ಥಯಾತ್ರೆಯ ಫಲವಿಲ್ಲ. ಅವರು ಮಾಡುವ ಶ್ರಮವೆಲ್ಲ ವ್ಯರ್ಥ, ಮತ್ತು ಖರ್ಚು ಮಾತ್ರ ನಿಜ. ಹಾಗಾದರೆ ಈ ತೀರ್ಥ ಯಾತ್ರೆಯ ಫಲ ಯಾರಿಗೆ ದೊರೆಯುತ್ತದೆ ಎಂಬುದನ್ನು ಅದರಲ್ಲಿಯೇ ಮುಂದೆ-

ಅಕೋಪನೋಽಮಲಮತಿಃ
ಸತ್ಯವಾದೀ ದೃಢವ್ರತಃ।
ಆತ್ಮೋಪಮಶ್ಚ ಭೂತೇಶು
ಸತೀರ್ಥ ಫಲಮಶ್ನುತೇ॥

ಯಾರಲ್ಲಿ ಕೋಪವೆಂಬುದಿಲ್ಲವೋ ಯಾರ ಬುದ್ಧಿ ಅತ್ಯಂತ ನಿರ್ಮಲವಾಗಿದೆಯೋ, ಯಾರು ಸತ್ಯವನ್ನೇ ಮಾತನಾಡುತ್ತಾರೋ, ಯಾರು ದೃಢವಾದ ನಿಶ್ಚಯ ಉಳ್ಳವರೋ ಮತ್ತು ಯಾರು ಎಲ್ಲ ಪ್ರಾಣಿಗಳನ್ನು ತನ್ನಂತೆಯೇ ಭಾವಿಸುವನೋ ಅಂತಹ ಮನುಷ್ಯನು ಮಾತ್ರ ತೀರ್ಥಯಾತ್ರೆಯ ಫಲವನ್ನು ಹೊಂದುತ್ತಾನೆ. ಅಲ್ಲದೆ ಯಾರು ಯಾರಿಂದ ಏನನ್ನು ಅಪೇಕ್ಷಿಸುವುದಿಲ್ಲವೋ, ಯಾವುದೇ ಪರಿಸ್ಥಿತಿಯಲ್ಲಿಯೂ ಸಂತುಷ್ಟರಾಗಿದ್ದಾರೆಯೋ ಅಹಂಕಾರದಿಂದ ಬಿಡಲ್ಪಟ್ಟಿದ್ದಾರೋ ನಿಸ್ವಾರ್ಥ ಬುದ್ಧಿಯಿಂದ ಕಾರ್ಯದಲ್ಲಿ ತೊಡಗಿರುವರೋ ಮಿತಾಹಾರಿಗಳೋ ಎಲ್ಲ ವಿಧವಾದ ಆಸಕ್ತಿಗಳನ್ನು ತ್ಯಜಿಸಿದವರೋ ಮತ್ತು ಇಂದ್ರಿಯಗಳನ್ನು ತಮ್ಮ ವಶದಲ್ಲಿ ಇರಿಸಿಕೊಂಡಿದ್ದಾರೋ ಅಂತಹವರಿಗೆಲ್ಲರಿಗೂ ತೀರ್ಥಯಾತ್ರೆಯ ಫಲವುಂಟು. ಅವರು ಮಾಡಿದ ಅಲ್ಪ ತೀರ್ಥ ಯಾತ್ರೆಯೂ ಬಹಳಷ್ಟು ಉತ್ತಮ ಫಲವನ್ನು ಕೊಡುತ್ತದೆ. ಇದನ್ನೇ ಪ್ರತಿಪಾದಿಸುವುದಕ್ಕಾಗಿ ಭಗವಾನ್ ಶಂಕರನು ಸ್ಕಂದ ಪುರಾಣದ ಬದರೀ ಖಂಡದಲ್ಲಿ — ಯಾರು ಚಂಚಲಚಿತ್ತರಾಗಿದ್ದಾರೋ, ಲೋಭಿಗಳಾಗಿದ್ದಾರೋ, ಮನಸ್ಸಿನಲ್ಲಿ ಪರಿಹಾಸ, ಪರಧನ, ಪರಸ್ತ್ರೀ ಅಪೇಕ್ಷೆ ಹೊಂದಿರುವರೋ, ಶರೀರದ ಮೇಲೆ ಹೊಲಸಾದ ವಸ್ತ್ರ ಧರಿಸಿರುತ್ತಾರೋ, ಅಸಮಾಧಾನರೋ ಅಪವಿತ್ರರೋ ಮತ್ತು ಸತ್ಕರ್ಮ ಹೀನರೋ ಅಂಥ ಮನುಷ್ಯರಿಗೆ ಎಷ್ಟೇ ತೀರ್ಥಾಟನೆಯಿಂದಲೂ ಫಲ ಮಾತ್ರ ಶೂನ್ಯ"— ಎಂದು ಹೇಳಿದ್ದಾನೆ. ಹೀಗೆ ತೀರ್ಥಾಟನೆಯ ಸಮಯದಲ್ಲಿ ಮನುಷ್ಯನು ಆ ಕ್ಷೇತ್ರದಲ್ಲಿರುವಾಗ ಮಮತಾರಹಿತನಾಗಿರಬೇಕು. ಅಹಂಕಾರದಿಂದ ದೂರವಿರಬೇಕು. ಬೇರೆಯವರ ವಸ್ತುಗಳನ್ನು ಅಪೇಕ್ಷಿಸಬಾರದು. ಕಳ್ಳತನ ಮಾಡಬಾರದು. ಬಂಧುಗಳಲ್ಲಿ ಅತೀ ಸ್ನೇಹ ತೋರಬಾರದು. ಶರೀರದಿಂದ ವಾಣಿಯಿಂದ ಮತ್ತು ಮನಸ್ಸಿನಿಂದ ಎಲ್ಲರ ಮೇಲೂ ಪ್ರೀತಿ, ಪ್ರೇಮ-ಸ್ನೇಹಗಳನ್ನು ತೋರಬೇಕು. ಅಲ್ಲದೆ ಧರ್ಮದಲ್ಲಿಯೂ ಮತ್ತು ಯೋಗದಲ್ಲಿಯೂ ಸಂಪೂರ್ಣ ಒಲವನ್ನು ತೋರಬೇಕು.

ಆದರೆ ಯಾರು ಪ್ರತ್ಯಕ್ಷವಾಗಿ ತೀರ್ಥ ಯಾತ್ರೆಯನ್ನು ಮಾಡಲಾರರೋ, ಯಾರು ದೈಹಿಕವಾಗಿ ಮತ್ತು ಮಾನಸಿಕವಾಗಿ ದುರ್ಬಲರೋ ಆರ್ಥಿಕವಾಗಿ ಕಡಮೆಯೋ ಅವರಿಗೂ ತೀರ್ಥಫಲ ದೊರೆಯಲೆಂದು 'ಮಾನಸ ತೀರ್ಥ'ವನ್ನು ವಿಧಿಸಿರುತ್ತಾರೆ. ಇದನ್ನೇ ಗೌತಮರು ಲೋಪಾಮುದ್ರೆಗೆ ತಿಳಿಸುತ್ತ—

ದಾನಂ ತೀರ್ಥಂ ದಮಸ್ತೀರ್ಥಂ
ಸಂತೋಷಸ್ತೀರ್ಥ ಮುಚ್ಯತೇ।
ಬ್ರಹ್ಮ ಚರ್ಯಂ ಪರಂ ತೀರ್ಥಂ
ತೀರ್ಥಂ ಚ ಪ್ರಿಯವಾದಿತಾ॥
ಜ್ಞಾನಂ ತೀರ್ಥಂ ಧೃತಿಸ್ತೀರ್ಥಂ
ತಪಸ್ತೀರ್ಥಮುದಾಹೃತಮ್।
ತೀರ್ಥಾನಾಮಪಿ ತತ್ತೀರ್ಥಂ
ವಿಶುದ್ಧಿರ್ಮನಸಃ ಪರಾ॥

ಎಂದಿದ್ದಾರೆ. ಸತ್ಯ, ಕ್ಷಮಾ, ಇಂದ್ರಿಯ ಸಂಯಮ, ಪ್ರಾಣಿದಯಾ, ದಾನ, ದಮನ, ಸಂತೋಷ, ಬ್ರಹ್ಮಚರ್ಯ, ಪ್ರಿಯ ಭಾಷಣ, ಜ್ಞಾನ, ಧೃತಿ ಮತ್ತು ತಪಸ್ಸು ಇವುಗಳೆಲ್ಲ ಪ್ರತಿಯೊಂದು ಒಂದೊಂದು ಪ್ರತ್ಯೇಕ ತೀರ್ಥವಿದ್ದಂತೆಯೇ. ಇವುಗಳ ಆಚರಣೆಯಿಂದ ತೀರ್ಥಾಟನೆ ಮಾಡಿದ ಫಲವೇ ದೊರೆಯುವುದು.

(ಆಧಾರ — ಕಲ್ಯಾಣ)



**ಶ್ರೀ ಬಾಲಚಂದ್ರ ಇನಾಮದಾರ**

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳಿಸಿಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಕೆ. ವಿಜಯಕುಮಾರ್
ಭವಾನಿಶಂಕರ್ ಏಜನ್ಸಿ
ಕೆ.ಎಂ. ಹಳ್ಳಿ, ಕೂಡ್ಲಿಗಿ.

ಸಿ.ಪಿ. ರಾಮಕೃಷ್ಣ
ಜವಳಿ ವ್ಯಾಪಾರಿಗಳು
ಚಾಮರಾಜನಗರ.

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್. ಶ್ರೀಕಂಠಯ್ಯ
ಶ್ರೀನಿಧಿ ಸ್ಟೋರ್ಸ್, ಕರ್ನಾಟಕ ಸಂಘ ರಸ್ತೆ
ಜಾಲಹಳ್ಳಿ, ಬೆಂಗಳೂರು.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕ ಬಳ್ಳಾಪುರ.

ವೆಂಕಟೇಶ ಶಿವಾಜಿ ಝಿಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ವಿ.ಎಸ್. ಗೋಪಾಲಕೃಷ್ಣ
ಬೃಂದಾವನ ಸ್ಟೋರ್ಸ್
10/125. 9ನೇ ಮೇನ್ 3ನೇ ಬ್ಲಾಕ್
ಜಯನಗರ, ಬೆಂಗಳೂರು.

ಕೆ.ಎಸ್. ವೆಂಕಟಾಚಲಪತಿಶೆಟ್ಟಿ
ರಮೇಶ್ ಸ್ಟೋರ್ಸ್
ಕುಣಿಗಲ್.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಡಿ. ಗೋಪಾಲಶೆಟ್ಟಿ
ನ್ಯೂಸ್ ಏಜಂಟ್
ಶಿವಾನಂದಸ್ಟೋರ್ಸ್. ಮದ್ದೂರು.

ಬಿ.ಕೆ. ವೆಂಕಟೇಶನ್
ಆಡಿಟರ್, 1759, 9ನೇ ಕ್ರಾಸ್
ತುಮಕೂರು.

ಬಿ.ಎಸ್. ಭಟ್
ಉದಯವಾಣಿ ಏಜಂಟ್
ಕಾಳೇಶ್ವರ.

ಸುಬ್ಬಾರಾವ್
ನ್ಯೂಸ್ ಏಜಂಟ್, ಆಸ್ಪತ್ರೆರಸ್ತೆ
ಮಧುಗಿರಿ.

ವೈ.ಎಸ್. ಮಲ್ಲಿಕಾರ್ಜುನ ಶೆಟ್ಟಿ
ಸ್ಟೇಟ್‌ಬ್ಯಾಂಕ್ ಆಫ್ ಮೈಸೂರ್ ಬಳಿ
ಕೂಡ್ಲಿಗಿ.

ವೆಂಕಟೇಶ್ವರ ಕಾಫಿವರ್ಕ್ಸ್, ಅಂಡ್ ಬುಕ್ ಡಿಪೋ
ಜಯಲಕ್ಷ್ಮಿ ಬಿಲ್ಡಿಂಗ್ಸ್, 610 ಬಸ್‌ಸ್ಟಾಂಡ್ ರಸ್ತೆ
ಮಂಡ್ಯ.

ಪಿ.ಎಸ್. ನಾಗರತ್ನಮ್ಮ
W/o ಪಿ.ಸತ್ಯನಾರಾಯಣ,ನಟೇಶ್‌ಕಾಂಪೌಂಡ್
ಬಂಗಾರಪೇಟೆ.

ಆನಂದರಾವ್. ನಿವೃತ್ತ ಉಪಾಧ್ಯಾಯರು
ಶಿವಪ್ಪ ನಾಯಕನಗರ
ಸಾಗರ.

ಎಸ್. ರತ್ನಮ್ಮ
ಸಲ್ಲಾಪುರ. ತರೀಕೆರೆ.

ಎಂ.ಎಸ್. ಕೃಷ್ಣಮೂರ್ತಿ
ಉತ್ತರಾದಿಮಠ
ಚಿತ್ರದುರ್ಗ.

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾರದಗಸ್ತಿ
ಬಿಜಾಪುರ.

ಎಸ್. ಮೂಡಲಗಿರಿರಾಜ
S/o ಶ್ರೀ ರಂಗಶೆಟ್ಟಿ,ಸಪ್ತಗಿರಿ ನಿಲಯ
ಭರಮಸಾಗರ.

ಶ್ರೀಮತಿ ರಾಜಗುರು
c/o ಡಿ.ಎನ್.ಆರ್. ರಾಜಗುರು
ಸರ್ಕಾರಿ ಜೂನಿಯರ್‌ಕಾಲೇಜು, ಮಾನವಿ

ವಿ.ಎಸ್. ಭಾಗ್ಯರಾಜಶೆಟ್ಟಿ
ಹುಲಿಕಲ್ಲು,ಅರಕಲಗೂಡು(ತಾ)
ಹಾಸನ.

ಕೆ.ಎಂ. ಶ್ರೀನಿವಾಸಮೂರ್ತಿ
ಪತ್ರಕರ್ತರು.ಓಲ್ಡ್ ಟೌನ್
ಭದ್ರಾವತಿ.

ಎ.ಎಂ. ಶ್ರೀನಿವಾಸ್.
ವಿನಾಯಕ ಟೈಲರ್ಸ್ ದೊಡ್ಡಪೇಟೆ
ಕೋಲಾರ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್
ಗಂಗಾವತಿ.

ಆರ್.ಶೇಷಾದ್ರಿ. ಅರ್ಚಕರು,
ಶ್ರೀಲಕ್ಷ್ಮೀನಾರಾಯಣಸ್ವಾಮಿದೇವಾಲಯ
ಕೊಳ್ಳೇಗಾಲ.

ಬಿ.ಎಸ್. ಮುಕುಂದ
1275,ಶ್ರೀಪಾದರಾಜ ಮಠದ ಎದುರು
ಮುಳಬಾಗಿಲು.

ಕೆ.ಎಸ್. ಲಕ್ಷ್ಮೀಕಾಂತ
ಎನ್.ಎ. 93 ಬಿ.ಇ.ಎಲ್. ಕಾಲೋನಿ
ಜಾಲಹಳ್ಳಿ, ಬೆಂಗಳೂರು.

ಟಿ.ಕೆ. ರಾಮಸ್ವಾಮಿ
ತಿರುಪತಿ ವೆಂಕಟೇಶ್ವರ ಸೈಕಲ್‌ಷಾಪ್
ಬಿ.ಎಚ್. ರೋಡ್, ತರೀಕೆರೆ.

ಪ್ರೇಮಾವತಿ
W/o ಪಿ. ಸಾರಂಗಪಾಣಿ. ರೋಜರ್ಸ್ ಕ್ಯಾಂಪ್
ಬಿ.ಪಿ. ಬ್ಲಾಕ್
ಮಾರಿಕುಪ್ಪಂ ಕೆ.ಜಿ.ಎಫ್.

ಡಿ. ಗೋಪಾಲಶೆಟ್ಟಿ
ಮದ್ದೂರು.

ಆರ್.ವಾಸುದೇವಶೆಟ್ಟಿ
ದಳಸನೂರು.

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆಕರ್ಷಕ ಕಮೀಷನ್ ಉಂಟು ಕೂಡಲೇ ವ್ಯವಹರಿಸಿ.

**ವೆಲ್‌ಫೇರ್ ಆಫೀಸರ್. ತಿ.ತಿ.ದೇ. ತಿರುಪತಿ**

(12 ನೇ ಪುಟದಿಂದ)

ಕೈ : ಮೃತ್ಯುವಿನಿಂದ ತಪ್ಪಿಸಿದ ಪ್ರಾಣಸಖಿಗೆ, ಮಾತು ಕೊಟ್ಟು ವಚನ ಭ್ರಷ್ಟನಾದೆನೆಂದು ನಿನ್ನ ಹಿರಿಯರಿಗೆಲ್ಲಾ ಹೇಳು? ಹೇಗೆ ಮುಖ ತೋರಿಸಲಿ ಅಂತ ಹಿಂಜರಿಯುತ್ತೀಯೇನೋ? ನೀತಿಗೆಟ್ಟವನಿಗೆ ಯಾವ ಲೋಕವಾದರೇನು?

ದಶರಥ: ಕೈಕೇಯಿ, ನಿನ್ನ ಅಪೇಕ್ಷೆಯಂತೆ ಭರತನಿಗೆ ಪಟ್ಟಾಭಿಷೇಕ ಮಾಡುತ್ತೀನಿ. ಆದರೆ ನನ್ನ ರಾಮನನ್ನು ವನವಾಸಕ್ಕೆ ಕಳಿಸೆಂದು ಮಾತ್ರ ಕೇಳಬೇಡ ನೀರಿನಿಂದ ಹೊರಗೆ ತೆಗೆದ ಮೀನು ಬದುಕಬಲ್ಲದೇನೋ, ಆದರೆ ರಾಮನನ್ನು ಬಿಟ್ಟು ನಾನು ಬದುಕಲಾರೆ. ರಾಮನಿಲ್ಲದೇ ಇದ್ದರೆ ನಾನು ತಿಳಿಯಲಾರೆ.

ಕೈ : ನೀವು ಇದಕ್ಕೆ ಒಪ್ಪದಿದ್ದರೆ ನಾನು ಪ್ರಾಣದಿಂದ ಉಳಿಯಲಾರೆ. ಈ ಪ್ರಾಯದಲ್ಲಿ ಕೀರ್ತಿ ಬೇಕೋ ಅಪಕೀರ್ತಿ ಬೇಕೋ? ಅದನ್ನು ಪಡೆಯುವ ಅವಕಾಶ ನಿಮ್ಮ ಕೈಯಲ್ಲಿದೆ. ಚೆನ್ನಾಗಿ ಯೋಚಿಸಿ. ಇಷ್ಟುದಿನ ಧರ್ಮವೇತ್ತ ಅಂತ ಕೀರ್ತಿ ಪಡೆದು ಬಾಳಿದ ನೀವು ಅಪಹಾಸ್ಯಕ್ಕೆ ಗುರಿ ಆಗಬೇಡಿ. ಕೊಟ್ಟ ಮಾತನ್ನು ನಡೆಸದೇ ಇದ್ದವರನ್ನು ಪುರುಷಾಧಮ ಅಂತಾರೆ.

ದಶರಥ: (ಪಟ ಪಟ ಅಂತ ಹಲ್ಲುಕಡಿದು) ಥೀ ಪಾಪಿ, ಇನ್ನು ನೀನು ನನ್ನ ಹೆಂಡತಿ ಅಲ್ಲ. ನಾನು ನಿನ್ನ ಗಂಡನಲ್ಲ. ಇಂದಿಗೆ ನಮ್ಮಿಬ್ಬರ ಸಂಬಂಧ ಕಡೆದುಹೋಯ್ತು. ಅಲ್ಲಿ ನೋಡು ಸೂರ್ಯೋದಯವಾಗಲಿದೆ. ಗುರುಹಿರಿಯರು ಅಭಿಷೇಕ ದ್ರವ್ಯಗಳನ್ನು ಸಜ್ಜು ಮಾಡಿಕೊಂಡು ಬಂದು ನನ್ನ ಬರವಿಗಾಗಿ ಕಾಯುತ್ತಿದ್ದಾರೆ.

ಕೈ : ಆದರೇನಂತೆ? ಪ್ರತಿಜ್ಞೆ ನಡೆಸಿಕೊಡುತ್ತೀಯೋ ? ಇಲ್ಲವೋ ? ತಿಳಿಸು.

(ದಶರಥ ದುಃಖಾವೇಶವನ್ನು ತಡೆಯಲಾರದೆ ಹಾ ರಾಮಾ– ಮೂರ್ಛೆ ಹೋಗುತ್ತಾನೆ. ಹೊರಗಡೆಯಿಂದ ಮಹಾರಾಜನಿಗೆ ವಾರ್ತೆಯನ್ನು ತಿಳಿಸಲು ಸುಮಂತ್ರ ಒಳಗೆ ಪ್ರವೇಶ ಮಾಡುತ್ತಿರುವಾಗ ಕೈಕೇಯಿ ತಾನೇ ನಾಲ್ಕು ಹೆಜ್ಜೆ ಬರುವಳು)

ಸುಮಂತ್ರ: ಮಹಾಪ್ರಭುಗಳಿಗೆ ಜಯವಾಗಲಿ. ಗುರುದೇವ ವಶಿಷ್ಠರು ಬ್ರಾಹ್ಮಣರ ಸಹಿತ ಪಟ್ಟಾಭಿಷೇಕಕ್ಕೆ ಬೇಕಾಗುವ ಸಿದ್ಧತೆಗಳನ್ನು ಮಾಡಿಕೊಂಡು ತಮ್ಮ ಬರುವಿಕೆಗಾಗಿ ನಿರೀಕ್ಷಿಸುತ್ತಿದ್ದಾರೆ. ಶ್ರೀರಾಮಚಂದ್ರನು ತಂದೆಯ ದರ್ಶನಕ್ಕೆ ಕಾದಿದ್ದಾನೆ. ಪ್ರಭುಗಳು ತುರ್ತಾಗಿ ಕರ್ತವ್ಯಗಳನ್ನು ಸೂಚಿಸಬೇಕಾಗಿ ವಿನಂತಿಸಿಕೊಳ್ಳುತ್ತಿದ್ದೇನೆ.

ಕೈ : ಸುಮಂತ್ರಾ-ಪ್ರಭುಗಳು ರಾತ್ರಿಯಲ್ಲಾ ನಿದ್ರೆಯಿಲ್ಲದೇ ತುಂಬಾ ಸುಸ್ತಾಗಿದ್ದಾರೆ. ನೀನು ತಕ್ಷಣ ರಾಮನ ಹತ್ತಿರ ಹೋಗಿ ಪ್ರಭುಗಳ ಆಜ್ಞೆ ಅಂತ ಹೇಳಿ ಕರೆದುಕೊಂಡು ಬಾ.

(ಸುಮಂತ್ರನು ಹೊರಟುಹೋದನಂತರ ಕೈಕೇಯಿ ಒಂದು ವಿಂಜಾಮರವನ್ನು ತೆಗೆದುಕೊಂಡು ದಶರಥನ ತಲೆ ಕಡೆ ಕುಳಿತುಕೊಂಡು ಗಾಳಿ ಹಾಕುತ್ತಾ ಇರುತ್ತಾಳೆ.

ಒಂದೆರಡು ಕ್ಷಣಗಳ ನಂತರ ಒಳಗೆ ಹೆಜ್ಜೆ ಇಟ್ಟ ರಾಮನು ಅಲ್ಲಿಯ ಪರಿಸ್ಥಿತಿ ಊಹಿಸಲಾರದಾದನು. ಒಮ್ಮೆ ತಾಯಿ ಕಡೆ ಮತ್ತೊಮ್ಮೆ ತಂದೆ ಕಡೆ ಆಯೋಮಯನಾಗಿ ನೋಡತೊಡಗಿದನು.)

(ದಶರಥ ರಾಮನ ಬರುವಿಕೆಯನ್ನು ತಿಳಿದು ನೀರು ತುಂಬಿದ ಕಣ್ಣನ್ನು ತೆರೆದು ರಾ...ಮಾ...ಎನ್ನುವನು.)

ರಾಮ: ಆ! (ಆವೇಶ ದುಃಖ ತಾಳಲಾರದೆ ಕೈಕೇಯಿಗೆ ವಂದಿಸುತ್ತ) ತಾಯಿ ತಂದೆಯವರ ಈ ದುರವಸ್ಥೆಗೆ ಕಾರಣವೇನು ? ಎಲ್ಲರಿಗೂ ಕ್ಷೇಮವೇ? ಭರತ ಶತ್ರುಘ್ನರು ಕ್ಷೇಮವೇ? ನನ್ನ ತಂದೆ ಕಣ್ಣಲ್ಲಿ ನೀರೇಕೆ ತುಂಬಿತುಳುಕುತ್ತಲಿದೆ ? ಗೊತ್ತಿದ್ದರೆ ನೀನಾದರೂ ತಿಳಿಸಿ ಹೇಳಮ್ಮಾ!

ಕೈ : ಅಪ್ಪಾ ಹೆದರಿಕೊಳ್ಳುವಂಥಾದ್ದೇನೂ ಆಗಿಲ್ಲಾ. ಧರ್ಮ ಸಂದೇಹ ಒಂದು ನಿನ್ನ ತಂದೆಯನ್ನು ಕಾಡುತ್ತಲಿದೆ. ಒಂದು ವಿಷಯದಲ್ಲಿ ತಾನು ಮಾತು ಕೊಟ್ಟು ಅದನ್ನು ನಡೆಸದೇ ಇರುವುದೇ–ಆತನ ತೊಳಲಾಟ

ರಾಮ: ತಾಯಿ ಅಂತ ಪ್ರಸಕ್ತಿ ಏನು ಏಕೆ ಬರಬೇಕು? ಭಾಷೆ ಕೊಟ್ಟನಂತರ ಅದನ್ನೂ ಎಂದೂ ಕೈಬಿಡಬಾರದು.

ಕೈ : ರಾಮಾ, ನೀನು ನಿನ್ನ ತಂದೆಯ ಹಾಗೆ ಮಾತನಾಡುತ್ತಿದ್ದೀಯೆ...ನನಗೆ ಹಿಂದೊಮ್ಮೆ ನಿನ್ನ ತಂದೆ ಎರಡು ವರಗಳನ್ನು ದಾನ ಮಾಡಿದ್ದಾನೆ. ಅದನ್ನು ಈಗ ನಾನು ಪಡೆಯಲಿಚ್ಛಿಸುತ್ತಾ ಇದ್ದೆ. ನಿನ್ನ ತಂದೆಗೆ ಧರ್ಮಸಂಕಟ ಬಂದಿದೆ. ನಿನ್ನ ಮೇಲಿನ ಮೋಹ. ಒಂದು ಕಡೆ ನನಗೆ ಕೊಟ್ಟ ಭಾಷೆ, ಮತ್ತೊಂದು ಕಡೆ ಸಂಕಟ–ಇವೆರಡೂ ನಿನ್ನ ತಂದೆಯನ್ನೂ ಬಾಧಿಸುತ್ತಲಿವೆ. ನಿನಗೆ ಶಕ್ತಿ ಇದ್ದರೆ ನಿನ್ನ ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಆತನ ದುಃಖವನ್ನು ಹೋಗಲಾಡಿಸು.

ರಾಮ: ಅಮ್ಮಾ ಈ ರಾಮನು ತಂದೆ ಮಾತಿಗೆ ಬೇರೊಂದನ್ನೂ ಹೇಳುವವನಲ್ಲ, ಮತ್ತು ಕೊಟ್ಟ ಭಾಷೆಯನ್ನು ತಪ್ಪುವವನಲ್ಲ. ನೀನು ಬಯಸಿದ ವರಗಳೇನು? ತಿಳಿಸು, ನನ್ನ ತಂದೆ ಪರವಾಗಿ ನಾನು ಸಾಧಿಸುತ್ತೇನೆ.

ಕೈ : ಮಗನೇ, ನಿಮ್ಮ ತಂದೆ ಮಕ್ಕಳಿಗೆ ಅಸಾಧ್ಯವಾದುದು ಯಾವುದೂ ಇಲ್ಲಾ. ಎಲ್ಲಾ ನಿಮ್ಮ ಅಂಗೈಯಲ್ಲಿರುವಂಥವುಗಳೇ? ಭರತನಿಗೆ ಪಟ್ಟಾಭಿಷೇಕ ಮಾಡೆಂದು, ನಿನಗೆ ಹದಿನಾಲ್ಕು ವರುಷ ಅರಣ್ಯವಾಸ ವಿಧಿಸು ಅಂತ ನಿನ್ನ ತಂದೆಯವರಲ್ಲಿ ಬಯಸಿದೆ. ತನ್ನ ಬಾಯಿಂದ ಈ ಮಾತನ್ನು ಹೇಳಲಾರದೇ ನಿನ್ನ ತಂದೆ ಒಳಗೊಳಗೇ ವ್ಯಥೆ ಪಡುತ್ತಿದ್ದಾರೆ ಜನಕನ ಕೀರ್ತಿ ಕಾಪಾಡಬೇಕೆಂದರೆ ಇವುಗಳನ್ನು ಮಾಡಿ ಪೂರೈಸು.

ರಾಮ: (ದೀನವಾಗಿ ನೋಡುತ್ತಾ) ತಾಯಿ ಈ ವಿಚಾರದಲ್ಲಿ ನನ್ನ ಮನಸ್ಸಿಗೆ ಒಂದು ನೋವಾಗಿದೆ!

(ಕೈಕೇಯಿ ಚಕಿತಗೊಳ್ಳುತ್ತಾಳೆ, ಮೆಟ್ಟಿ ಬೀಳುತ್ತಾಳೆ)
(ದಶರಥ ನಾಚಿಕೆಯಿಂದ ತಲೆ ತಗ್ಗಿಸುತ್ತಾನೆ)

ರಾಮ : ಅಮ್ಮಾ! ಇಷ್ಟು ಚಿಕ್ಕ ಬಯಕೆಯನ್ನು ಬಯಸಲು ಸ್ವತಃ ಹೇಳಿ ಆಜ್ಞೆ ಮಾಡಲು ನನ್ನ ತಂದೆ ಸಂಶಯ ಪಟ್ಟು ನಿನ್ನ ಬಾಯಿಂದಾ ಹೇಳಿಸಿದನಲ್ಲಾ! ಇದೇ ನನ್ನ ನೋವು. ಆತ ನನ್ನ ಪಿತೃಭಕ್ತಿಯನ್ನು ಏಕೆ ಶಂಕಿಸಿದನೋ? ಅರ್ಥಮಾಡಿಕೊಳ್ಳಲಾಗುತ್ತಿಲ್ಲಾ. ತಾಯಿ ನನ್ನ ತಂದೆಯ ಆಜ್ಞೆಯನ್ನು ಶಿರಸಾ ವಹಿಸಿ ರಾಜ್ಯವನ್ನು ಏಕೆ? ಸೀತೆಯನ್ನು, ಕಡೆಗೆ ನನ್ನ ಪ್ರಾಣವನ್ನು ಸಹ ತ್ಯಜಿಸಲು ಸಿದ್ಧನಿದ್ದೇನೆ. ರಾಮನ ತತ್ತ್ವವನ್ನು ಪೂರಾ ಅವಗಾಹನೆ ಮಾಡಿಕೊಳ್ಳದಿರುವುದರಿಂದ ನೀವು ಇಷ್ಟು ಅನುಮಾನಕ್ಕೊಳಗಾಗಿರುವಿರಿ. ಅಮ್ಮಾ ವಾಯುವೇಗದಲ್ಲಿ ಭರತನಿಗೆ ಸುದ್ದಿ ತಿಳಿಸಿರಿ ನಾನೀಗಲೇ ನಾರು ಬಟ್ಟೆಗಳನ್ನುಟ್ಟು ವನವಾಸಕ್ಕೆ ಹೊರಡುವೆ.

(ದಶರಥನನ್ನು ನೋಡುತ್ತಿ) ತಂದೆ, ರಾಜಭೋಗಗಳಿಗೆ ನಿನ್ನ ರಾಮನು ಎಂದಿಗೂ ದಾಸನಲ್ಲ. ನಿನ್ನ ಆಜ್ಞೆಯನ್ನು ತಾಯಿಯವರ ಮುಖಾಂತರ ತಿಳಿದುಕೊಂಡೆ. ನನ್ನ ಸೌಭಾಗ್ಯ ಅವುಗಳನ್ನು ಪೂರೈಸುವ ಅವಕಾಶ ನನಗೆ ದಕ್ಕಿದೆ. ನಿನ್ನ ರಾಮನು ನಿನಗೆಂದೂ ಎದುರಾಡುವವನಲ್ಲ ಸಂಶಯವನ್ನು ಬದಿಗಿಡು...

ದಶರಥ : (ಮಗನ ಮುಖವನ್ನು ನೇರವಾಗಿ ನೋಡಲಾರದೆ ದಶರಥ ತಲೆ ತಗ್ಗಿಸುತ್ತಾನೆ)

ರಾಮ : ತಾಯಿ ಇವುಗಳನ್ನು ಒಂದು ವರ ಅಂತ ತಿಳಿದು ನೀನು ತಂದೆಯನ್ನು ಕೇಳಬೇಕಾ? ನನ್ನನ್ನು ಕರೆದು 'ರಾಮಾ' ನನಗಿದು ಇಷ್ಟ. ನೀನು ಹೀಗೆ ನಡೆದುಕೋ ಅಂತ ಅಂದರೆ ನಾನು ಆಗುವುದಿಲ್ಲ ಅಂತ ಅನ್ನುವೆನೇ?

ದಶರಥ : ರಾಮಾ ನಿನ್ನಿಂದಾ ಪರಿತ್ಯಕ್ತವಾದ ಈ ಅಯೋಧ್ಯಾ ಎಷ್ಟು ನಿರ್ಭಾಗ್ಯವಾಗಿದೆ. ನನ್ನನ್ನು ನಿನ್ನೊಂದಿಗೆ ಕರೆದೊಯ್ಯಿ. ರಾಮಾ ಅನುಮಾನಿಸುತ್ತಿರುವೆಯಾ? ರಾಮಾ ನೀನೆಲ್ಲರಿಗೂ ಪ್ರಿಯವಾದವನು, ನನ್ನ ಪ್ರಾಣಕ್ಕೆ ಪ್ರಾಣ. ಅಂಥ ನೀನು ಅಪ್ಪಾ ಕಾಡಿಗೆ ಹೋಗುತ್ತೀನಿ ಅಂತ ನೀನು ಅಡಿಷ್ಟಕ್ಕೆ ಅಳುತ್ತಿದೀನಿ. ಆ ಮಾತು ಕೇಳಿದಾಕ್ಷಣ ಎದೆ ಒಡೆದು ಸಾಯಬಾರದೇ! ನನ್ನದು ಮಿಥ್ಯಾ ಪ್ರೇಮ. ನಿನ್ನನ್ನು ವನವಾಸಕ್ಕೆ ಹೋಗಬೇಡವೆಂದು ನಾನು ಹಠ ಮಾಡುವುದಿಲ್ಲ. ರಾಮಾ ಈ ನಿರ್ಭಾಗ್ಯನನ್ನು ಮರೆಯುವುದಿಲ್ಲ ತಾನೆ!

ದಾಸಿ : (ಒಳಗೆ ಪ್ರವೇಶಿಸಿ) ಪ್ರಭುಗಳಿಗೆ ಜಯವಾಗಲಿ. ಪ್ರಭುಗಳ ಅಂತರಂಗಿಕರಾದ ಸುಮಂತ್ರರು ಸೀತಾದೇವಿಯೊಂದಿಗೆ ಒಳಗಡೆ ಪ್ರವೇಶ ಮಾಡುತ್ತಿರುವರು. (ಹೊರಟುಹೋಗುವಳು)

ಸೀತೆ : (ಸುಮಂತ್ರನ ಹಿಂದೆ ಹಿಂದೆ ಒಳಗಡೆ ಪ್ರವೇಶ ಮಾಡಿದ ಸೀತೆಯು ತಡವರಿಸುವ ಹೆಜ್ಜೆಗಳೊಂದಿಗೆ ರಾಮನ ಕಾಲಿಗೆ ನಮಸ್ಕರಿಸುತ್ತಾಳೆ.) (ದೀನವಾಗಿ) ಪ್ರಭೂ, ಮಹಾರಾಜರು ನಿಮ್ಮನ್ನು ಕೋಸಲ ದೇಶಕ್ಕಲ್ಲದೇ ಕಾಡಿಗೆ ರಾಜ್ಯಾಭಿಷೇಕ ಮಾಡುತ್ತಿದ್ದಾರೆಂದು ಊರೆಲ್ಲಾ ಸುದ್ದಿಯಾಗಿದೆ. ನಿಮ್ಮೊಂದಿಗೆ ಕಾಡಿಗೆ ಬರುವ ಅದೃಷ್ಟ ನನಗಿದೆಯೋ ಇಲ್ಲವೊ ತಿಳಿಯದಾಗಿದೆ. ತಾವು ಒಪ್ಪಿಗೆ ಕೊಟ್ಟರೆ ಈ ದೇಹ ಈ ಪ್ರಾಣ ನಿಮ್ಮ ಸೇವೆಗೆ ಸಿದ್ಧವಾಗಿದೆ.

ರಾಮ : ಜಾನಕೀ, ದುಃಖಿಸಬೇಡ. ಮಹಾ ಧಾರ್ಮಿಕನಾದ ಜನಕ ಮಹಾರಾಜನ ಮನೆಯಲ್ಲಿ ಬೆಳೆದವಳು. ಧರ್ಮಪಾಲನೆಗಾಗಿ ಪ್ರಾಣತ್ಯಾಗ ಮಾಡಬೇಕೆನ್ನುವುದು ನಿನಗೆ ತಿಳಿಯದೇ ಇರುವ ವಿಷಯವಲ್ಲ. ಈ ಹದಿನಾಲ್ಕು ವರುಷ ಗಟ್ಟಿ ಮನಸ್ಸು ಮಾಡಿ ಅತ್ತೆ ಮಾವಂದಿರ ಸೇವೆಯಲ್ಲಿ ಕಾಲವನ್ನು ಕಳೆ.

ಸೀತೆ : ನಾಥಾ, ಹೆಂಡತಿಯನ್ನು ಸಹಧರ್ಮಚಾರಿಣಿ ಅಂತ ಅಂತಾರೆ. ಧರ್ಮಾಚರಣೆಯಲ್ಲಿ ಪತಿಗೆ ಸತಿಯು ಜೊತೆಯಾಗಿರುವುದು ವಿಧಿವಿಹಿತ. ವನವಾಸಕ್ಕೆ ಗಂಡನನ್ನು ಆಜ್ಞಾಪಿಸಿದರೆ ಹೆಂಡತಿಯನ್ನೂ ಆಜ್ಞಾಪಿಸಿದಂತೆ ಅಲ್ಲವೇ? ಹೆಂಡತಿ ಅರ್ಧಾಂಗಿ. ದೇಹದ ಅರ್ಧ ಭಾಗವನ್ನು ಬಿಟ್ಟು ನೀವಾದರೂ ಹೇಗೆ ಹೋಗುವಿರಿ?

ರಾಮ : ಸೀತೆ, ಅರಣ್ಯವಾಸವೆಂದರೆ ತುಂಬಾ ಕ್ಲೇಶಭೂಯಿಷ್ಟವಾದುದ್ದು. ನಿನಗೆ ಸಾಧ್ಯವಾಗುವುದಿಲ್ಲ.

ಸೀತೆ : ನಾಥಾ, ಏನೇನೋ ಹೇಳಿ ನನ್ನ ಮನ ಬದಲಾಯಿಸಲು ನೋಡಬೇಡಿ. ಯಾರು ನಿಮ್ಮ ಅಗಲುವಿಕೆಯನ್ನು ಒಂದು ಕ್ಷಣವಾದರೂ ಸಹಿಸಲಾರರೋ, ಪ್ರಕೃತಿ ಪುರುಷರಂತೆ ಯಾರು ನಿಮ್ಮನ್ನು ಅನುಗಾಲ ಬಿಟ್ಟಿರುವುದಿಲ್ಲವೋ? ಅಂತಹ ಅಬಲೆಗೆ ಹದಿನಾಲ್ಕು ವರುಷ ವಿಯೋಗ ಅನ್ನೋ ಕ್ರೂರ ಶಿಕ್ಷೆಯನ್ನು ವಿಧಿಸುವುದು ನಿಮಗೆ ನ್ಯಾಯವೇ?

ರಾಮ : (ಹೆಂಡತಿಯನ್ನು ಅನುನಯವಾಗಿ ಹತ್ತಿರಕ್ಕೆ ಕರೆದುಕೊಳ್ಳುತ್ತಾನೆ) ದೇವೀ ದುಃಖಿಸಬೇಡ, ನಿನಗೆ ಇಷ್ಟವಿಲ್ಲದಿದ್ದರೆ ಸ್ವರ್ಗ ಸಹ ಬೇಡ ನನಗೆ. ಮಾನವಂತನು ಕೀರ್ತಿಯನ್ನು ಹೇಗೆ ಬಿಟ್ಟುಕೊಡುವುದಿಲ್ಲವೊ ಅದೇ ರೀತಿ ನಾನು ನಿನ್ನನ್ನು ಬಿಟ್ಟಿರುವುದಿಲ್ಲ.

ದಶರಥ : ರಾಮಾ, ಈ ಘೋರವನ್ನು ನಾನು ನೋಡಲಾರೆ. ನಿನ್ನ ತಂದೆಗೆ ವಿರುದ್ಧವಾಗಿ ಈ ರಾಜ್ಯವನ್ನು ಸ್ವಾಧೀನ ಮಾಡಿಕೊ.

ರಾಮ : ತಂದೆ, ಅಂಥ ಮಾತನಾಡಬೇಡಿ. ಹದಿನಾಲ್ಕು ವರ್ಷ ಎಂದರೆ ಎಷ್ಟು? ಅತೀ ಶೀಘ್ರವಾಗಿ ಕಳೆದುಹೋಗುತ್ತದೆ. ಆ ಮೇಲೆ ನಿಮ್ಮ ಪಾದಸೇವೆ ಮಾಡುತ್ತಾ ಕಾಲಕಳೆಯುವೆ.

ಸು : ಅಮ್ಮಾ ಕೈಕೇಯಿ, ರಾಜ್ಯ ಜ್ಯೇಷ್ಠಪುತ್ರನಿಗೆ ಸೇರುವುದು ಅನಾದಿಯಿಂದ ಬಂದ ಧರ್ಮವನ್ನು ಹಾಳು ಮಾಡಬೇಡ. ರಾಮನು ಕಾಡಿಗೆ ಹೋದರೆ ಈ ರಾಜ್ಯದಲ್ಲಿ ಯಾರು ವಾಸವಾಗಿರುತ್ತಾರೆ, ಎಲ್ಲರೂ ಆ ರಾಮನ ಹಿಂದೆ ಕಾಡಿಗೆ ತೆರಳುತ್ತಾರೆ. ಆ ಮೇಲೆ ಭರತ–ನಿನ್ನ ಭರತನಾಳುವುದು ಹಾಳು ಬಿದ್ದ ಅರಮನೆಗಳನ್ನು ಮತ್ತು ಅಲ್ಲಾಡದೇ ಇರೋ ಗಿಡಗಂಟೆಗಳನ್ನು ಎಂದು ಮಾತ್ರ ತಿಳಿ. ನಿನ್ನ ಕ್ರೂರ ಕೃತ್ಯಕ್ಕೆ ಈ ಭೂಮಿ ಎರಡು ಹೋಳಾಗದೇ ಇದೆಯಲ್ಲಾ, ಅಂತ ನನಗಾಶ್ಚರ್ಯವಾಗುತ್ತಲಿದೆ. ಅಮ್ಮಾ ಕೈಕೇಯಿ, ಇನ್ನೂ ಕಾಲ ಮಿಂಚಿಲ್ಲ. ಶ್ರೀರಾಮನ ಪಟ್ಟಾಭಿಷೇಕಕ್ಕೆ ಮನಸ್ಸು ಮಾಡಿ ನಾಥನಿಗೆ ಮನಶ್ಶಾಂತಿಯನ್ನುಂಟುಮಾಡು.

(ಕೈಕೇಯಿ ಮುಖ ಮುಚಿಯುತ್ತಾ ಪಕ್ಕಕ್ಕೆ ತಿರುಗುತ್ತಾಳೆ)

ದಶರಥ: (ಸುಮಂತ್ರನಿಗೆ) ಮಿತ್ರನೇ, ರಾಮನ ವನವಾಸಕ್ಕೆ ಚತುರಂಗ ಬಲವನ್ನು ರತ್ನಾಭರಣಗಳನ್ನೂ ಕಳಿಸಿಕೊಡು. ರಾಮನ ಗೆಳೆಯರನ್ನು ಭೃತ್ಯರನ್ನು ಅವನ ಜೊತೆಗೆ ತೆರಳುವಂತೆ ಸಿದ್ಧತೆಮಾಡು. ನನ್ನ ಮಗ ಅರಣ್ಯದಲ್ಲಿರುವುದನ್ನು ಮರೆತು ಇಚ್ಛಾ ವಿಹಾರದಲ್ಲಿ ಸುಖವಾಗಿರಲು ಅನುಕೂಲವಾಗುವಂಥಾ ಎಲ್ಲಾ ಸಲಕರಣೆ ಸರಂಜಾಮುಗಳನ್ನು ಒದಗಿಸಿ ಕಳಿಸು.

ಕೈ: ರಾಜ್ಯವನ್ನು ಸ್ಮಶಾನ ಶೂನ್ಯ ಮಾಡಿ ಭರತನಿಗೇನು ಚಿಪ್ಪು ಕೊಡಬೇಕೆಂದಿರುವಿರಾ ?

ದಶರಥ: (ಕೋಪದಿಂದ ಕೆಂಡ ಕಾರುತ್ತಾ) ಕ್ರೂರಾತ್ಮಳೇ ? ದುರ್ಭರವಾದ ಭಾರವನ್ನು ನನ್ನ ತಲೆ ಮೇಲೆ ಹೊರಿಸಿ ನನ್ನನ್ನು ಪಾತಾಳಕ್ಕೆ ತುಳಿಯಬೇಕೆಂದಿರುವೆಯಾ? ಅದೂ ಸಾಲದೇ ಮೇಲೆ ಮಣ್ಣನ್ನು ಸುರಿಯುತ್ತಿದ್ದೀಯಾ. ನಿನ್ನ ವರಗಳೇನೋ ಅದನ್ನು ಮಾತ್ರ ತೆಗೆದುಕೋ, ಹೆಚ್ಚಿಗೆ ಮಾತನಾಡಬೇಡ.

ರಾಮ: ಅಪ್ಪಾ! ಆನೆಯನ್ನು ದಾನ ಮಾಡಿದ ಮೇಲೆ ಆ ದಾನಿ ಅದಕ್ಕೆ ಕಟ್ಟಿರುವ ಹಗ್ಗವನ್ನು ಅಪೇಕ್ಷಿಸುತ್ತಾನೆಯೇ! ಎಲ್ಲವನ್ನೂ ತ್ಯಾಗಮಾಡಿರುವ ನನಗೆ ಸೈನ್ಯ ಸಾಮಗ್ರಿಗಳೇತಕ್ಕೆ ? ಯಾರೂ ನನ್ನ ಹಿಂದೆ ಬರಬೇಕಾಗಿಲ್ಲ. ಇನ್ನು ತಡ ಮಾಡುವುದು ತರವಲ್ಲ.

ಕೈ: (ಮಂಥರೆ ನಾರು ಮಡಿ ಬಟ್ಟೆ ಗಂಟನ್ನು ತಂದುಕೊಡುತ್ತಾಳೆ. ಅದನ್ನು ಬಿಚ್ಚಿ ಬಟ್ಟೆಗಳನ್ನು ತೆಗೆದು) ಇಕೋ (ರಾಮನ ಕೈಗೆ ಕೊಟ್ಟು) ತೆಗೆದುಕೋ.

ರಾಮ: (ನಾರು ಮಡಿ ಬಟ್ಟೆಗಳನ್ನು ರಾಮನು ಕಣ್ಣಿಗೆ ಹಚ್ಚಿಕೊಂಡು ತೆಗೆದುಕೊಳ್ಳುತ್ತಾನೆ. ಒಂದನ್ನು ಸೀತೆಗೆ ಕೊಟ್ಟು ಇನ್ನೊಂದನ್ನು ತನ್ನ ರೇಷ್ಮೆ ಬಟ್ಟೆಗಳ ಮೇಲೆ ಸುತ್ತಿಕೊಳ್ಳುತ್ತಾನೆ)

ಸೀತೆ: (ರಾಮನು ಕೊಟ್ಟ ಬಟ್ಟೆಯನ್ನು ಹೇಗೆ ಸುತ್ತಿಕೋಬೇಕೋ ತಿಳಿಯದೇ) ನಾಥಾ, ಕಾಡಿನಲ್ಲಿ ವಾಸ ಮಾಡುವ ಸ್ತ್ರೀಯರು ಈ ಬಟ್ಟೆಗಳನ್ನು ಹೇಗೆ ಉಟ್ಟುಕೊಳ್ಳುತ್ತಾರೋ ನನಗೆ ತಿಳಿಯದು. (ಒಂದನ್ನು ಹೆಗಲ ಮೇಲೆ ಹಾಕಿಕೊಂಡು ಇನ್ನೊಂದನ್ನು ಕೈಯಲ್ಲಿ ಹಿಡಿದುಕೊಂಡಿರುತ್ತಾಳೆ)

(ರಾಮನು ಸೀತೆಯ ಕೈಯಲ್ಲಿರುವ ವಸ್ತ್ರಗಳನ್ನು ತೆಗೆದುಕೊಂಡು ಅವಳಿಗೆ ತಾನೆ ಉಡಿಸುತ್ತಾನೆ. ಎಲ್ಲರೂ ಈ ದೃಶ್ಯವನ್ನು ನೋಡಿ ದುಃಖದಿಂದ ಗೋಳಾಡುತ್ತಾರೆ.)

ದಶರಥ: (ಹಣೆ ಹಣೆ ಚಚ್ಚಿಕೊಳ್ಳುತ್ತಾ) ಅಯ್ಯೋ! ನನ್ನ ಅಜ್ಞಾನ ಎಷ್ಟು ಅನರ್ಥಕ್ಕೆ ಮೂಲಕಾರಣವಾಯ್ತು... ಬಿದಿರು ಹೂವು ಬಿಟ್ಟಹಾಗೆ ನನ್ನ ಬುದ್ಧಿ ಆತ್ಮ ವಿನಾಶಕ್ಕೆ ಕಾರಣವಾಯ್ತು (ಕೈಕೇಯಿ ಕಡೆಗೆ ತಿರುಗಿ)ಕುಲಘ್ನೇ! ರಾಮ ನಿನಗೆ ಶತ್ರುವಾಗಿರಬಹುದು. ಸೀತೆ ಏನು ಮಾಡಿದ್ದಾಳೆ ? ಪಾಪಿ, ಆ ಮಗೂಗೆ ಈ ನಾರು ಮಡಿ ಕೊಡಲಿಕ್ಕೆ ಕೈಗಳಾದರೂ ಹೇಗೆ ಬಂದವೇ!

(ಸೀತಾ ರಾಮರು ಕೈಕೇಯಿ, ದಶರಥರಿಗೆ ನಮಸ್ಕಾರ ಮಾಡುತ್ತಾರೆ.)

ರಾಮ: ತಂದೆ ಅಪ್ಪಣೆ ಕೊಡಿ, ಕಾಡಿಗೆ ಹೋಗಿ ಬರುವೆ.

ದಶರಥ: ನನ್ನ ಪ್ರೀತಿಯ ಪುತ್ರನ ಮುನಿವೇಶವನ್ನು ನೋಡಲು ನನ್ನ ಕಣ್ಣುಗಳು ಹೆದರಿ ಮುಚ್ಚಿಕೊಂಡು ಹೋಗುತ್ತಲಿವೆ. ದುಃಖದಿಂದ ಮಾತು ಬಾರದಾಗಿದೆ. ಜೀವವನ್ನು ಬಿಡದ ಈ ಪಾಪಿ ಶರೀರವನ್ನು ಇನ್ನೂ ಎಷ್ಟು ದಿನ ಅನುಭವಿಸಬೇಕೋ ? ಅಯ್ಯೋ ದೌರ್ಭಾಗ್ಯವೇ! ಈ ಸಾಮ್ರಾಜ್ಯಕ್ಕೆ ರಾಜನನ್ನಾಗಿ ಮಾಡಲಿಕ್ಕೆ ಬೇರಾರೂ ಸಿಕ್ಕಲಿಲ್ಲವೇ ? ಅಯ್ಯೋ ಹತವಿಧೀ! ನನ್ನ ರಾಮನು ಹುಟ್ಟಿದಾಗಿನಿಂದ ಒಂದು ದಿನ ಅವನ ಮುಖದರ್ಶನವಾಗದಿದ್ದರೆ ಆ ದಿನ ದುರ್ದಿನ ಅಂತ ಅಂದುಕೊಳ್ಳುತ್ತಿದ್ದೇನೆ. ಅಂಥ ನನ್ನ ರಾಮನನ್ನು ನನ್ನ ಬಾಯಿಂದಲೇ ಹೋಗೆಂದು ನಾನೇ ಈ ದಿನ ಅವನನ್ನು ಹೊರಗಟ್ಟುತ್ತಿರುವೆನಲ್ಲವೇ–ಅಯ್ಯೋ...!

ಸು: ಮಹಾರಾಜಾ ದುಃಖಿಸಬೇಡಿ. ಆಜ್ಞೆ ಮಾಡಿದ್ದು ನೀವೇ. ಆದಕಾರಣ ರಾಮನು ಪ್ರತಿಭಟನೆ ಮಾಡದೆ ಶಿರಸಾವಹಿಸುತ್ತಿರುವನು. ರಾಮನು ಮನಸು ಮಾಡಿದರೆ ಈ ಮೂರೂ ಲೋಕಗಳನ್ನು ಕಾಲುಗುರಿನಿಂದ ಕೆಳಕ್ಕೆ ತಂದುಕೊಳ್ಳೋ ಸಾಮರ್ಥ್ಯ ಉಳ್ಳವನು. ತಾನು ಅನುಗ್ರಹಿಸಿ ಸಂಧಿಸಿದರೆ ಆನೆಗಳು ಸಹಿತ ನಡುಗಿಹೋಗುತ್ತವೆ. ಪರ್ವತಗಳು ಚಲಿಸುತ್ತವೆ. ಸೂರ್ಯಚಂದ್ರರು ಕಳಾವಿಹೀನರಾಗುತ್ತಾರೆ. ರಾಜಾ ನಿನ್ನ ರಾಮನು ಹೆದರುವುದು ಒಂದು ಧರ್ಮಕ್ಕಾಗಿ. ಆದ್ದರಿಂದ ನಿನ್ನ ಮಾತಿಗೆ ತಲೆಬಾಗಿ ಕಾಡಿನ ಪಾಲಾಗುತ್ತಿದ್ದಾನೆ.

ದಶರಥ: (ರಾಮನನ್ನು ಗಾಢಾಲಿಂಗನ ಮಾಡಿಕೊಳ್ಳುತ್ತಾ) ರಾಮಾ ನನ್ನ ಬಿಟ್ಟು ಹೋಗುತ್ತೀಯಾ, ನಿನ್ನ ಅಗಲುವಿಕೆಯಿಂದ ನಾನು ಜೀವದಿಂದ ಉಳಿದಿರುತ್ತೇನೆಂದು ತಿಳಿದಿರುವೆಯಾ ? ಅಪ್ಪಾ ನನ್ನ ಮೇಲೆ ಕರುಣೆ ಬಾರದೇನೋ !

ಸು: (ದಶರಥನನ್ನು ಸಮಾಧಾನ ಮಾಡುತ್ತಾ) ಮಹಾರಾಜಾ (ಹಂಸ ತೂಲಿಕಾತಲ್ಪದ ಕಡೆ ನಡೆಸಿಕೊಂಡು ಬರುತ್ತಾ) ಸೀತಾರಾಮರನ್ನು ರಥದ ಮೇಲೆ ಕೂಡಿಸಿಕೊಂಡು ಕಾಡಿಗೆ ಬಿಟ್ಟು ಬರುತ್ತೇನೆ.

ದಶರಥ: ನನ್ನ ಕಣ್ಣುಗಳಿಂದ ಆ ದೃಶ್ಯವನ್ನು ನೋಡಲಾರೆ.

(ರಾಮನು ತಂದೆಯ ಆವೇದನೆಯನ್ನು ಭರಿಸಲಾರದೆ ಸೀತೆಯ ಕೈ ಹಿಡಿದೆಳೆದುಕೊಂಡು ಬೇಗ ಬೇಗನೇ ಹೊರಗೆ ಬರುತ್ತಾನೆ.)

ದಶರಥ: ಸುಮಂತ್ರಾ.. ನನ್ನ ರಾಮನು ಹೊರಟು ಹೋಗುತ್ತಿದ್ದಾನೆ. ಕೈಕೇಯಿ, ಇನ್ನು ನಿನ್ನ ಕಣ್ಣು ತಣ್ಣಗಾಯಿತಲ್ಲವೇ ? (ಸೀತಾರಾಮರು ಹೊರಟು ಹೋಗಿರುತ್ತಾರೆ) ಸುಮಂತ್ರಾ ನನ್ನ ಮಗುವನ್ನು ಕಾಡಿನ ಪಾಲು ಮಾಡಲು ನೀನು ಜೊತೆಗೆ ಹೋಗಿ ಬಾ. ಎಷ್ಟು ಜನ್ಮದ ಕರ್ಮದ ಫಲವೋ ಈ ದಿನ ನಾನನುಭವಿಸುತ್ತಿರುವುದು. ದುಷ್ಟ ಬುದ್ಧಿಯಿಂದ ಕೈಕೇಯಿ ವರಗಳನ್ನೇಕೆ ಕೇಳಬೇಕು. ಅದನ್ನು ನಾನು ಪ್ರತಿಭಟಿಸದೆ

ಕೇಳಿದ್ದೇ ತಡ ಒಪ್ಪಿಗೆ ಏತಕ್ಕೆ ಕೊಡಬೇಕು! ನನ್ನ ಬುದ್ಧಿ ನನ್ನ ಸ್ವಾಧೀನದಲ್ಲಿರಲಿಲ್ಲವೆಂದು ಕಾಣುತ್ತೆ. ಎಲ್ಲಾ ಆ ದೈವೇಚ್ಛೆ... ಅಲ್ಲದೇ ಇದ್ದರೆ ನನ್ನ ಪ್ರಾಣಸಮಾನನಾದ ನನ್ನ ರಾಮನಿಗೆ ಇಂಥ ಶಿಕ್ಷೆಯನ್ನು ವಿಧಿಸುತ್ತಿದ್ದನೆ!

ಸುಮಂತ್ರಾ, ಯವ್ವನದಲ್ಲಿದ್ದಾಗ ಒಂದು ದಿನ ಬೇಟೆಗಾಗಿ ಕಾಡಿಗೆ ಹೋಗಿದ್ದೆ. ಪೊದೆಗಳ ದಡುವಿನಲ್ಲಿ ಇದ್ದ ಒಂದು ಸರೋವರದಲ್ಲಿ ಬುಳ ಬುಳ ಅಂತ ಒಂದು ಧ್ವನಿ ಕೇಳಿಸಿತು. ಯಾವುದೋ ಕ್ರೂರ ಮೃಗನೆಂದೆಣಿಸಿ ಭ್ರಮೆಯಲ್ಲಿ ಶಬ್ದವೇದಿ ವಿದ್ಯೆಯಿಂದ ಬಾಣ ಪ್ರಯೋಗ ಮಾಡಿದೆ. ಅಜ್ಞಾನದಿಂದ ನಾನು ಪ್ರಯೋಗ ಮಾಡಿದ ಬಾಣ ಒಂದು ಋಷಿ ಕುಮಾರನಿಗೆ ಚುಚ್ಚಿಕೊಂಡಿತು. ಆ ಬಾಲಕನ ತಂದೆ ತಾಯಿ ಕುರುಡರು. ಆ ಬಾಲಕನ ವಿನಹ ಇನ್ನಾವ ಆಸರೆಯು ಇಲ್ಲದ ಆ ವೃದ್ಧ ದಂಪತಿಗಳಿಗೆ ಪುತ್ರಶೋಕವನ್ನುಂಟು ಮಾಡಿದೆ. ಪುತ್ರಶೋಕ ತಾಳಲಾರದೇ ಅವರು ಆತ್ಮತ್ಯಾಗ ಮಾಡಿಕೊಂಡರು. ಆ ಪಾಪದ ಫಲವೇ ಇದು. ಆ ದಿನ ಅವರಿಗೆ ನಾನು ಕೊಟ್ಟ ಪುತ್ರಶೋಕದ ಫಲ ಈ ದಿನ ನಾನು ಅನುಭವಿಸುತ್ತಿರುವುದು. ಅವರ ವೇದನೆ ಶಾಪವಾಗಿ ನನಗೆ ತಾಕಿದೆ. ಎಂಥವರಾದರೂ ಮಾಡಿದ ಕರ್ಮ ಅನುಭವಿಸಲೇ ಬೇಕು.

ಸುಮಂತ್ರಾ, ಹದಿನಾಲ್ಕು ವರುಷ ಕಳೆದನಂತರ ಅಯೋಧ್ಯೆ ಸಿಂಹಾಸನವನ್ನೇರುವ ರಾಮನನ್ನು ನೋಡುವ ಭಾಗ್ಯವೇ ಭಾಗ್ಯವು! ಮೃತ್ಯು ನನ್ನನ್ನು ನುಂಗುವ ಮೊದಲೇ ನನ್ನ ರಾಮನ ದಿವ್ಯ ಮಂಗಳ ರೂಪವನ್ನು ಈ ಪಾಪಿ ಕಣ್ಣಿನಿಂದ ಪುನಃ ನೋಡಬಲ್ಲನೇ!

ರಾಮಾ, ಕೈಲಾಗದೇ ಇರುವ ನಿನ್ನ ತಂದೆಯನ್ನು ಕ್ಷಮಿಸುತ್ತೀಯಾ! ನಿನ್ನ ಪುನಃ ದರ್ಶನವಿಲ್ಲದೇ ಈ ದೇಹವನ್ನು ತ್ಯಜಿಸುತ್ತಿರುವ ನಿನ್ನ ಈ ತಂದೆಯನ್ನು ಅಪಾರ್ಥ ಮಾಡಿಕೊಳ್ಳುವುದಿಲ್ಲ ತಾನೇ! ಅಗೋ ಯಮಭಟರು ನನಗಾಗಿ ಬಾಗಿಲಲ್ಲಿ ಕಾದು ನಿಂತಿದ್ದಾರೆ. ಸುಮಂತ್ರಾ ನನ್ನ ಮೇಲೆ ಕೋಪ ಮಾಡಿಕೋಬೇಡವೆಂದು ನನ್ನ ಶ್ರೀರಾಮನಿಗೆ ಹೇಳುತ್ತೀಯಲ್ಲಾ! ರಾಮಾ!

ಬರುತ್ತಿದ್ದೇನೆ... ಬರುತ್ತಿದ್ದೇನೆ... (ಗಾಳಿಯಲ್ಲಿ ಕೈಗಳನ್ನು ಬೀಸುತ್ತಾ, ರಾಮಾ... ರಾಮಾ... (ಪ್ರಲಾಪಿಸುತ್ತಾ ನೆಲದ ಮೇಲೆ ಕುಸಿದು ಬೀಳುತ್ತಾನೆ.)

ಪರದೆ ನಿಧಾನವಾಗಿ ಕೆಳಗಿಳಿಯುತ್ತದೆ.



---

## ಶಂಕರ ಜಯಂತಿ

ಭಟ್ಟಪಾದರಿಂದ ಸ್ಫೂರ್ತಿಯನ್ನು ಪಡೆದ ಶಂಕರಾಚಾರ್ಯರು ಸ್ವಲ್ಪವೂ ವಿಳಂಬ ಮಾಡದೆ ತಮ್ಮ ಕಾರ್ಯವನ್ನಾರಂಭಿಸಿದರು. ತೀರ್ಥಕ್ಷೇತ್ರ ನಿವಾಸಿಗಳಾದ ಪ್ರಕಾಂಡ ಪಂಡಿತರನ್ನೆಲ್ಲ ಅವರು ಭೇಟಿಯಾಗಲಾರಂಭಿಸಿದರು. ತಮ್ಮ ವಾದದಿಂದ ಎಲ್ಲರೂ ಪ್ರಭಾವಿತರಾಗುವಂತೆ ಮಾಡಿ ಎಲ್ಲರನ್ನೂ ಏಕತ್ರ ಮಿಳಿತರಾಗುವಂತೆ ಮಾಡಿದರು. ಪ್ರಯಾಗದಲ್ಲಿ ಬಹು ದೊಡ್ಡ ಧರ್ಮ ಸಮ್ಮೇಲನವನ್ನು ಕೂಡಿಸಿದರು. ತಮ್ಮ ಅನುಯಾಯಿಗಳನ್ನು ಕಳುಹಿಸಿ ಬೌದ್ಧ ಪಂಡಿತರೆಲ್ಲ ಆ ಸಮ್ಮೇಲನದಲ್ಲಿ ಪಾಲ್ಗೊಳ್ಳುವಂತೆ ನೋಡಿಕೊಂಡರು. ಭಟ್ಟಪಾದರನ್ನು ಪರ್ವತದಿಂದ ಧುಮುಕುವಂತೆ ಮಾಡಿದ್ದ ಮಾಹಿಷ್ಮತಿಯ ಸುಧರ್ಮರಾಜನನ್ನೇ ಆ ಸಮ್ಮೇಳನದ ಅಧ್ಯಕ್ಷನನ್ನಾಗಿ ಮಾಡಿದರು. ಪೂರ್ವನಿರ್ಧಾರಿತವಾದ ದಿನದಲ್ಲಿ ವಿದ್ವಾಂಸರ ಸಮ್ಮೇಳನವು ಪ್ರಾರಂಭವಾಯಿತು.

ಶಂಕರಾಚಾರ್ಯರು ತಾವು ಈ ಸಮ್ಮೇಳನವನ್ನು ಕೂಡಿಸಿದ ಕಾರಣವನ್ನು ಬಹು ಗಂಭೀರವಾಣಿಯಲ್ಲಿ ಪ್ರಚುರಪಡಿಸಿದರು. ತಾವು ಕರೆದಿರುವ ಈ ಸಮ್ಮೇಳನವು ಯಾವುದಾದರೊಂದು ನಿರ್ಣಯಿತವಾದ ಗೊತ್ತುವಳಿಯನ್ನು ಸ್ವೀಕರಿಸುವುದೆಂಬ ಮಾತನ್ನೂ ಸಹ ಅವರು ಬಹಿರಂಗಪಡಿಸಿದರು. ಅವರ ಈ ಮಾತನ್ನು ನೆರೆದ ಪಂಡಿತರೆಲ್ಲರೂ ಒಪ್ಪಿಕೊಂಡರು. ಯಾವ ಪಕ್ಷವು ವಾದದಲ್ಲಿ ಸೋಲುತ್ತದೆಯೋ ಆ ಪಕ್ಷದವರು ಗೆದ್ದವರ ಮಾತನ್ನು ಸ್ವೀಕರಿಸಬೇಕೆಂಬ ತೀರ್ಮಾನವನ್ನು ಸ್ವೀಕರಿಸಲಾಗಿತ್ತು. ಬೌದ್ಧಪಂಡಿತರಿಗಂತೂ ಈ ವಾದದಲ್ಲಿ ತಾವು ಖಂಡಿತವಾಗಿ ಗೆಲ್ಲುತ್ತೇವೆ ಎಂಬ ನಂಬಿಕೆ ಇತ್ತು. ಶಂಕರಾಚಾರ್ಯರು ಮಹಾ ದೈವೀಪುರುಷರು. ಆದುದರಿಂದ ಖಂಡಿತವಾಗಿಯೂ ತಮ್ಮ ಪಕ್ಷಕ್ಕೆ ಜಯ ಎಂದು ಸನಾತನವಾದಿಗಳು ನಂಬಿದ್ದರು. ಆದುದರಿಂದ ಎರಡೂ ಪಕ್ಷದವರು ಸಮ್ಮೇಳನವು ನಿರ್ಧರಿಸಿದ ಕರಾರುಗಳಿಗೆ ಒಮ್ಮತದಿಂದ ಅಂಗೀಕಾರ ನೀಡಿದ್ದರು.

ರಾಜನ ಸಮ್ಮುಖದಲ್ಲಿ ವಾದವು ಪ್ರಾರಂಭವಾಯಿತು. ಎರಡೂ ಪಕ್ಷದವರು ತಮ್ಮ ತಮ್ಮ ಸಿದ್ಧಾಂತವನ್ನು ಚಾತುರ್ಯದಿಂದ ಮಂಡಿಸತೊಡಗಿದರು. ಸಮಯ ಸರಿದಂತೆಲ್ಲ ಎಲ್ಲರೂ ಬಹು ಉತ್ಸುಕರಾಗಿ ಚರ್ಚೆಗಳನ್ನು ಕೇಳುತ್ತಲಿದ್ದರು. ಶಂಕರಾಚಾರ್ಯರು ಬೌದ್ಧಮತದ ಎಲ್ಲ ವಿಚಾರಗಳನ್ನು ಖಂಡಿಸಿದರು. ಇದರಿಂದಾಗಿ ವೈದಿಕ-ಪಂಥೀಯರ ಗುಂಪಿನಲ್ಲಿ ವಿಜಯದ ಚಿನ್ಹೆಗಳು ಕಾಣಬರತೊಡಗಿದವು.

# ಕುಂಭಮೇಳದ ಆರಂಭ

ಸೋತಪಕ್ಷದವರು ಗದ್ದಲವನ್ನಾರಂಭಿಸುವ ಸನ್ನಾಹದಲ್ಲಿದ್ದರು. ಶಂಕರಾಚಾರ್ಯರಂತೂ ಧೀರ ಗಂಭೀರ ಭಾವದಿಂದ ಮಂಡಿತರಾಗಿದ್ದರು. ರಾಜಾ ಸುಧನ್ವನೂ ಸಹ ಸಮಯ ಸಂದರ್ಭಗಳನ್ನರ್ಥ ಮಾಡಿಕೊಂಡಿದ್ದ. ಗದ್ದಲವನ್ನು ಹಿಡಿತದಲ್ಲಿ ತರುವಂತೆ ಆತನು ಸೈನಿಕರಿಗೆ ಎಚ್ಚರಿಕೆಯನ್ನಿತ್ತಿದ್ದ. ಆತನು ತನ್ನ ಅಂತಿಮ ನಿರ್ಣಯವನ್ನು ಬಹು ಸ್ಪಷ್ಟವಾದ ರೀತಿಯಲ್ಲಿ ಸಭೆಗೆ ತಿಳಿಸಿದ. "ಬೌದ್ಧರ ವಾದವು ಪರಾಜಯವನ್ನು ಹೊಂದಿದೆ''. ಈ ನಿರ್ಣಯದಿಂದಾಗಿ ಅಂದಿನ ಸಭೆಯಲ್ಲಿ ಸನಾತನ ಪಂಥೀಯರಿಗೆಲ್ಲ ಹೊಸ ಜೀವವು ಬಂದಂತಾಯಿತು. ವೈದಿಕಧರ್ಮ ಧ್ವಜವನ್ನು ಶಂಕರಾಚಾರ್ಯ ತ್ರಿವೇಣಿ ಸಂಗಮದಲ್ಲಿ ಹಾರಾಡುವಂತೆ ಮಾಡಿದ್ದರು. ಅಂದಿನಿಂದ ಅವರು ಭಾರತದ ಉದ್ದಗಲಕ್ಕೂ ಸಂಚಾರವನ್ನಾರಂಭಿಸಿದರು. ಎಲ್ಲಿನೋಡಿದರಲ್ಲಿ ತಮ್ಮ ಅದ್ವೈತವಾದವು ಮೇಲೆದ್ದು ನಿಲ್ಲುವಂತೆ ನೋಡಿಕೊಂಡರು. ಅವರ ಈ ಪ್ರಯತ್ನದಿಂದಾಗಿ ಹುತಾತ್ಮರಾಗಿದ್ದ ಕುಮಾರಿಲಭಟ್ಟರ ಆತ್ಮಕ್ಕೆ ಶಾಂತಿಯು ಲಭಿಸುವಂತಾಯಿತು.




ಅಂದಿನಿಂದ ಪ್ರತಿ ಹನ್ನೆರಡು ವರುಷಕ್ಕೊಮ್ಮೆ ಮಕರ ರಾಶಿಗೆ ಗುರುವಿನ ಆಗಮನವಾದಾಗ ಪ್ರಯಾಗದಲ್ಲಿರುವ ತ್ರಿವೇಣಿಸಂಗಮದಲ್ಲಿ ವೈದಿಕ ಧರ್ಮಾವಲಂಬಿಗಳ ಮಹಾ ಸಮ್ಮೇಳನವು ಕೂಡುವಂತೆ ಏರ್ಪಾಟಾಯಿತು. ಅದನ್ನೇ ಕುಂಭಮೇಳ ಎಂದು ಮುಂದಿನವರು ಕರೆಯಲಾರಂಭಿಸಿದರು. ಶಂಕರ ಭಗವತ್ಪಾದರು ಅಂದು ಹಾರಿಸಿದ ವೈದಿಕ ಧರ್ಮ ಧ್ವಜವನ್ನು, ಅದರ ವೈಭವವನ್ನು ಈ ತೀರ್ಥಕ್ಷೇತ್ರವು ರಕ್ಷಿಸಿ ಇಂದಿಗೂ ಬಹು ಜಾಗರೂಕತೆಯಿಂದ ಕೊಂಡುಬಂದಿರುವುದು ವಿಶೇಷದ ಸಂಗತಿಯಾಗಿದೆ.

ಶ್ರೀ ಆದ್ಯ ರಾಮಾಚಾರ್ಯ

( 6ನೇ ಪುಟದಿಂದ )

ಗಿದೆ. ಜೇನಿನ ಧಾರೆಯಂತೆ ಭಕ್ತಿರಸ ಇಲ್ಲಿ ಓತಪ್ರೋತವಾಗಿ ಹರಿದಿದೆ. ಪರಮಾತ್ಮನಾದ ಶ್ರೀನಿವಾಸ ಈ ಭೂಮಿಯಲ್ಲಿ ಬಂದಾಗ ಸಾಮಾನ್ಯ ಜನರಲ್ಲಿ ತಾನೂ ಒಂದಾಗಿ ಬೆರೆತು ನಡೆದುಕೊಂಡ ರೀತಿ, ಪ್ರಸಂಗಗಳನ್ನು ಬಣ್ಣಿಸುವಾಗ ಆಚಾರ್ಯರು ಆಡುನುಡಿಯ ಅಂದವನ್ನು ತೆರೆದು ತೋರಿಸಿದ್ದಾರೆ.

ಶೇಷಾಚಾರ್ಯರು ಮರಾಠಿ ಮನೆಮಾತಿನ ದೇಶಸ್ಥ ಮಾಧ್ವ ಮನೆತನಕ್ಕೆ ಸೇರಿದವರಾದ್ದರಿಂದ ಮರಾಠಿ ದೇಸಿ ಪ್ರಯೋಗಗಳು ಈ ಕೃತಿಯಲ್ಲಿ ಅನೇಕ ಕಡೆ ಬಂದಿವೆ. ಆಚಾರ್ಯರ ಕಾಲದಲ್ಲಿ ವಿವಾಹ ಸಮಾರಂಭದಲ್ಲಿ ನಡೆಯುತ್ತಿದ್ದ ಅನೇಕ ಕಾರ್ಯಕ್ರಮಗಳನ್ನು ನಾವು ಇಲ್ಲಿ ಕಾಣಬಹುದು. ನಾಣಿವಾರ, ಚಾಕ್‌ನಾಣಿ, ನೇಲ್‌ನಾಡೆ ಮುಂತಾದ ಪ್ರಕ್ರಿಯೆಗಳು ಈಗಿನ ಮದುವೆಗಳಲ್ಲಿ ಕಣ್ಮರೆಯಾಗಿಬಿಟ್ಟವೆ. ಆ ಕಾಲದಲ್ಲಿ ಮದುವೆಗಳು ನಡೆಯುತ್ತಿದ್ದ ರೀತಿಯನ್ನು ನಮ್ಮ ಕಣ್ಣ ಮುಂದೆ ಪದಗಳಲ್ಲಿ ಸೆರೆಹಿಡಿದು ಒದಗಿಸಿದ್ದಾರೆ. ಕೃತಿಕಾರರು ಇದರ ಬೆನ್ನಲ್ಲಿಯೇ ಲೀಲಾಮಾನುಷ ವಿಗ್ರಹನಾದ ಶ್ರೀನಿವಾಸ ಸಾಮಾನ್ಯವ್ಯಕ್ತಿಯಂತೆ ವಿವಾಹ ನಡೆಸಿಕೊಂಡಿದ್ದನ್ನೂ ನೆನಪಿಗೆ ತರುತ್ತಾರೆ.

ಧಾರವಾಡದ ಗಂಡುಕನ್ನಡದ ಸೊಗಡು ನಮ್ಮ ಮೆಚ್ಚುಗೆ ಗಳಿಸುತ್ತದೆ. ಕೊರವಂಜಿ ಕಣಿ ಹೇಳುವ ಪದದಲ್ಲಿ 'ವೋಳ್ಯವ್ವಾ', 'ದುಂಡಿ' ಎಂಬ ಸಹಜ ಪ್ರಯೋಗಗಳು ಇಲ್ಲಿವೆ.

ಬೀಗರು ಮದುವೆ ಮನೆಯಲ್ಲಿ ಪರಸ್ಪರ ಹಾಸ್ಯ ಮಾಡುವ ರೀತಿ, ಉರುಟಣೆ ಹಾಡು, ಬಾಗಿಲು ತೆಗೆಸುವ ಹಾಡು—ಇವು ಸರಳ ಸುಂದರವಾಗಿವೆ. ದೇವತೆಗಳ ಆಗಮನವನ್ನು ಬಣ್ಣಿಸುವ ಕೋಲು ಹಾಡು, ಬೀಗರನ್ನು ಗೇಲಿಮಾಡುವ 'ಮೇಟಿ ರಾಯರು ಬಂದರು.................' ಪದದಲ್ಲಿ ದೇವತೆಗಳ ವಿಲಕ್ಷಣ ಸ್ವರೂಪವನ್ನು ಮೃದು ಹಾಸ್ಯದೊಡನೆ ವಣಿಸಿದ್ದಾರೆ. ಭೋಜನದ ವೇಳೆ ಬೀಗರು ಹಾಸ್ಯ ಮಾಡುವ ಬಗೆ ಸಹಜವಾಗಿದೆ.

'ಧರಣೀದೇವಿ ಹೆಸರಿಗೆ ತಕ್ಕಂತೆ ಸೂಕ್ಷ್ಮ (ಕ್ಷ್ಮಾ ಎಂದರೆ ಭೂಮಿ) ವಾಗಿ ಬಡಿಸುತ್ತಾಳೆ; ಸಣ್ಣ ಮೊರವನ್ನು ನೆಲಕ್ಕೆ ಬಡಿದು 'ಇನ್ನು ಅನ್ನವಿಲ್ಲ' ಎನ್ನುತ್ತಾಳೆ. ಅಡಿಗೆಯ ಪದಾರ್ಥ ಬೇಕೆಂದಾಗ, ಅತ್ತ ಕಡೆಸುಳಿಯದೆ, ಆ ಹೊತ್ತು ತಪ್ಪಿಸಿ ಬರುತ್ತಾಳೆ. ಸೌಟು ಮುಟ್ಟಿ ತುಪ್ಪ ಬಡಿಸುತ್ತಾಳೆ— ಹೀಗೆ ಗೇಲಿ ಮಾಡುವುದು ಎಷ್ಟು ಸಹಜವಾಗಿದೆ.

'ಜಯ ಜಯಾ ಶ್ರೀನಿವಾಸ............... ಹಾಡಿನಲ್ಲಿ ಬರುವ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರದೇಶಗಳ ಹೆಂಗೆಳೆಯರು ಧರಿಸುವ ವಿಶಿಷ್ಟ ಆಭರಣಗಳು, ಅವರನ್ನು ಉರುಟಣೆಗೆ ಆಯಾಭಾಷೆಗಳಲ್ಲೇ ಕರೆಯುವ ರೀತಿ, ಅಲ್ಲಿನ ಸೊಬಗು, ಶ್ರೀನಿವಾಸನ ಅಲೌಕಿಕ ವಿವಾಹ ಸಮಾರಂಭವನ್ನು ಮಾನವರ ವಿವಾಹದಂತೆ ತೋರಿಸಿ, ನಮ್ಮಲ್ಲಿ ಅಭಿಮಾನ ಮೂಡಿಸುತ್ತದೆ.

ಉರುಟಣೆ ಹಾಡಿನಲ್ಲಿ ಪದ್ಮಾವತಿ ಶ್ರೀಹರಿಯ ದಶಾವತಾರಗಳ ವೈಲಕ್ಷಣ್ಯಗಳನ್ನು ನಿಂದಾಸ್ತುತಿಯ ಮೂಲಕ ಮಾಡುವ ಸೊಬಗು ಆಚಾರ್ಯರ ಕಥನಕಲೆಯನ್ನು ಎತ್ತಿಹೇಳುತ್ತದೆ.

'ನೀರೊಳು ಮುಳುಗಿ...............' ಎಂಬ ಈ ಹಾಡಿನಲ್ಲಿ ಶ್ರೀಹರಿಯ ಪ್ರತಿಯೊಂದು ಅವತಾರದ ವಿಷಮತೆಯನ್ನೂ ಪದ್ಮಾವತಿ ಹಾಸ್ಯಮಾಡುತ್ತಾಳೆ.

ಇದೇರೀತಿ ಬಾಗಿಲು ತೆಗೆಸುವ ಹಾಡಿನಲ್ಲಿ ಶ್ರೀನಿವಾಸ ತನ್ನ ಹತ್ತು ಅವತಾರಗಳ ಪರಾಕ್ರಮವನ್ನು ಹೇಳಿಕೊಂಡಾಗಲೂ, ಬಾಗಿಲು ಹಾಕಿಕೊಂಡ ಲಕ್ಷ್ಮೀದೇವಿ ಆಯಾ ಅವತಾರಗಳ ಅತಿಮಾನುಷತೆಯನ್ನು ಕೆಣಕಿ, ವಿಡಂಬನೆಯಿಂದ ನಿಂದಿಸುತ್ತಾಳೆ. ಕಡೆಗೆ ಮಾನವರೂಪಿಯಾದ ಶ್ರೀನಿವಾಸ, 'ನಾರಿಯನೆತ್ತಿಕೊಂಡು ನಾರಿ ಬಹಳ್ಹೊತ್ತಾಯಿತು ಧೀರೆ ವಂದಿಪೆ ಬಾಗಿಲು ತೆಗೆಯೆ ...............' ಎಂದು ಬೇಡಿದಾಗ ಬಾಗಿಲು ತೆಗೆಯುತ್ತಾಳೆ. ಲೋಕಾವತ್ ತು ಲೀಲಾ ಕೈವಲ್ಯಮ್—ಯಾವ ರೂಪದಲ್ಲಿ ಪರಮಾತ್ಮರೆ ಇದ್ದರೂ ಅದಕ್ಕನುಗುಣವಾಗಿ ತನ್ನ ವ್ಯಾಪಾರಂಗಳನ್ನು ತೋರಿಸುತ್ತಾನೆ ಎಂಬ ತತ್ತ್ವವನ್ನು ಆಚಾರ್ಯರು ಇಲ್ಲಿ ನಿರೂಪಿಸಿ, ಜ್ಞಾಪಿಸಿದ್ದಾರೆ.

ಹೆಣ್ಣೊಪ್ಪಿಸುವ ಹಾಡಿನಲ್ಲಿ ಹೆತ್ತತಾಯಿಯ ದುಃಖ, ಧೀರನಾದರೂ ಮಗಳ ಅಗಲಿಕೆಯಿಂದ ಆಕಾಶರಾಯ ದುಃಖಿಸುವುದು—ಹೆತ್ತವರ ಭಾವನೆಗಳನು ಸಹಜವಾಗಿ ಪ್ರತಿಬಿಂಬಿಸುತ್ತವೆ.

ಲೋಕರೀತಿಯ ಯಾವುದೇ ಘಟನೆಯನ್ನು ವರ್ಣಿಸಿದಾಗಲೂ ಅದರ ಬೆನ್ನಲ್ಲೇ ಪರಮಾತ್ಮನ ಮಹಿಮೆಯನ್ನು ಈ ಕೃತಿ ನಮಗೆ ಜ್ಞಾಪಿಸುತ್ತದೆ. ಇಲ್ಲಿ ಅನೇಕ ಅನುಭವೋಕ್ತಿಗಳೂ, ನಮಗೆ ಕಾಣ ತ್ತವೆ. 'ಸಾವಿರ ಸುಳ್ಳು ಹೇಳಿ ಮದುವೆ ಮಾಡು' 'ಒಂದು ಪ್ರಯತ್ನ ಪ್ರಯತ್ನವೇ ಅಲ್ಲ', 'ಕಾಯಿ ಕುಡುಗೋಲು ಒಪ್ಪಿಸಿದ್ದೇನೆ'—ಮುಂತಾದ ಸು ಗಳು ಲೋಕೋಕ್ತಿಗಳಾಗಿ ನಮ್ಮ ಗಮನ ಸೆಳೆಯುತ್ತವೆ.

ಶ್ರೀನಿವಾಸ ಕಲ್ಯಾಣ ಕೃತಿ – ಹೀಗೆ ಕೇವ ಸುಂದರ ಕಾವ್ಯವಷ್ಟೇ ಅಲ್ಲದೆ, ಅನುಭವ ಸಾರವೂ ಹೌದು. ಇದು ಪರಮಾತ್ಮನಲ್ಲಿ ಗಾಢ ವಾದ ಭಕ್ತಿ ಮೂಡಿಸುವ ಸಾಧನವಾಗಿದೆ. ಈ ಕೃ ಯಲ್ಲಿ ಶೇಷಾಚಾರ್ಯರಂತಹ ಅಂತರಂಗ ಭಕ್ತ ತಪಶ್ಶಕ್ತಿ ಅಡಗಿದೆಯೆನ್ನುವುದು ಅತಿಶಯೋಕ್ತಿ ಯೇನಲ್ಲ ಶ್ರೀನಿವಾಸನ ಪರಮಾನುಗ್ರಹ ಕೃತಿಯ ಮೇಲಿದೆ.



( 8ನೇ ಪುಟದಿಂದ)

ಭಿನ್ನ ಭಿನ್ನ ನಾಮಧೇಯಗಳಿಂದ ಉಲ್ಲೇಖಿಸಿದೆ ಸ್ಮೃತಿ ಚಂದ್ರಿಕೆಯಲ್ಲಿ ಈ ೧೮ ಭಾಗಗಳ ನಿರೂ ಪಣೆಯಿದೆ. ಇವೆಲ್ಲ ವರ್ಣಾಶ್ರಮದ ಹೊರಗಿನವು ಮುಂದಿನಕಾಲದಲ್ಲಿ ಹರಿಹರ, ನಂತರ ಕನ್ನಡ ಕ ಸಮೂಹ ಮತ್ತು ಶಾಸನಗಳು ಜನಸಾಮಾನ್ಯ ಹದಿನೆಂಟು ಗುಂಪು ಅಥವಾ ಸಮಯಗಳ ಸಂಬಂಧಪಟ್ಟವೆಂದು ವಿವರಿಸುತ್ತ ಬಂದಿವೆ ಬಾದಾಮಿಯಲ್ಲಿ ದೊರೆತ ಚಾಲುಕ್ಯ ಶಾಸನದ ಈ ಶಾಸನಗಳ ಅಥವಾ ಉದ್ಯೋಗ ಸಂಸ್ಥೆಗ ಹಲವಾರು ಹೆಸರುಗಳು ಸಿಕ್ಕುತ್ತವೆ. ಚಮ ಕಾರರು, ಕಲ್ಕುಟಿಗರು, ಉಪ್ಪಾರರು, ಹಾಡುಗಾ ರರು, ನಟರು, ಮಾಲೆಗಾರರು, ಹೂವಾಡಿಗ ಚಾತುರ್ವರ್ಣದ ಜೊತೆಯಲ್ಲಿಯೇ ಉಕ್ತವಾ ದ್ದಾರೆ.

(ಸಶೇಷ

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ಯುವವಾಣಿ

ಬಡವನಾರ್? ಮಡವಿಯೊಲವಿನ
ಸವಿಯುನರಿಯದನು
ಹುಡುಗರಾಟದಿ ಬೆರೆತು ನಗಲರಿಯದನು
ಉಡುರಾಜನೋಲಗದಿ ಕುಳಿತು
ಮೈಮರೆಯದನು
ಬಡಮನಸೆ ಬಡತನವೊ
ಮರುಳಮುನಿಯ ॥

-ಮರುಳ ಮುನಿಯನ ಕಗ್ಗದಿಂದ

ಬಡಮನಸ್ಸು ಎಂದರೆ ದುರ್ಬಲ ಮನಸ್ಸು, ಈ ದುರ್ಬಲ ಚಿತ್ತದಿಂದ ಹೃದಯ ಹೀನತೆವುಂಟಾಗಿ ನಾವು ಏನನ್ನೂ ಸಾಧಿಸಲಾರೆವು; ಇದನ್ನೇ ಗೀತೆ "ನಾಯ ಮಾತ್ಮ ಬಲಹೀನೇನಲಭ್ಯಃ" ಎಂದೂ "ಕ್ಷುದ್ರಂ ಹೃದಯ ದೌರ್ಬಲ್ಯಂ" ಎಂದೂ ತಿಳಿಸಿದೆ. ಬಡಮನಸ್ಸಿಗೆ ಕರಣಂಗಳ ಚೇಷ್ಟೆಯೇ ಕಾರಣ. ಇದು ಕುಗ್ಗಿನ ಬಾಳಿಗೆ ಬುನಾದಿ.

ಬದುಕು ನಿಂತ ನೀರಾಗುವುದು ದುರ್ಬಲ ಮನದಿಂದ, ಆದುದರಿಂದ ಬಾಳ್ವೆ ನಿಂತ ನೀರಾಗದೇ ನಿರಂತರ ಹರಿಯುವ ಚೈತನ್ಯ ಪ್ರವಾಹವಾಗಬೇಕು. ಅನುಭವದ ಬಾಗಿಲನ್ನು ತೆರೆದಿಡಬೇಕು.

'ಕಾರಣ–ಪರಿಣಾಮ'ದ ತತ್ತ್ವದಂತೆ ದೇಹದುರ್ಬಲವಾದರೆ ಮನವು ಕುಗ್ಗುತ್ತದೆ. ಕುಗ್ಗಿದ ಮನಸ್ಸು ಹಿಗ್ಗಲಾರದು. ಮನ ಹಿಗ್ಗಬೇಕಾದರೆ ನಿತ್ಯವೂ ಮನಶ್ಶೋಧನೆ, ಪ್ರತಿಕ್ಷಣ ಧರ್ಮಚಿಂತನೆ, ಲೋಕಹಿತ ಸೇವನೆ ಎಂಬ ಲಕ್ಷಣಗಳನ್ನು ಬೆಳೆಸಿಕೊಂಡಾಗ ಬಾಳ್ವೆ ಹಿಗ್ಗಾಗಿ ಚೈತನ್ಯದಿಂದ ಕೂಡಿರುತ್ತದೆ.

ಬಡಮನಸ್ಸು ಪಾಮರವೇದಾಂತವನ್ನು ಕಲ್ಪಿಸಿಕೊಂಡು ಜವಾಬ್ದಾರಿಯನ್ನುತಪ್ಪಿಸಿ, ದೈನ್ಯತೆಯನ್ನುಹೆಚ್ಚಿಸಿ, ಹೇಡಿತನದ ವಿರಕ್ತಿ-ಬಾಯಿಮಾತಿನ ವಿರಕ್ತಿಯನ್ನು ಬೆಳೆಸುತ್ತದೆ.

ಕುಗ್ಗಿದ ಮನ ವೈಗಳ್ಳ ಭಕ್ತಿಯನ್ನು ಬೆಳೆಸಿ, ಮನಸ್ಸನ್ನು ಜಳ್ಳುಮಾಡಿ, ಧೃಢ ಮನಸ್ಸನ್ನು ಹಾಳಾಗಿಸುತ್ತದೆ. ಇದಕ್ಕೆ ಪೋಷಕವಾಗಿ ಅಭಾವದ – ವೈರಾಗ್ಯದ ಹಾಡುಗಳು ಸ್ತೋತ್ರಗಳು, ನಮ್ಮನ್ನು ಕುಗ್ಗಿಸಿ ಕುಬ್ಜರನ್ನಾಗಿ ಮಾಡಿಬಿಟ್ಟಿವೆ. ಉದಾಹರಣೆಗೆ–

"ಜನ್ಮ ಸಾಕು ಮಾಡೋ, ಸಾಕು–
ಮಾಡೋ..."

ಜನ್ಮ ದುಃಖಂ ಜರಾದುಃಖಂ
ಜಾಯಾ ದುಃಖಂ ಪುನಃ ಪುನಃ।
ಸಂಸಾರ ಸಾಗರಂ ದುಃಖಂ
ಸರ್ವಂ ದುಃಖಮಯಂ ಜಗತ್ ॥

ಇಂಥಹ ಅಗ್ಗದ ವೇದಾಂತ ಹೋಗಬೇಕು. ಕೀಳು ಸಾಹಿತ್ಯ ಹಣೆಯಬರಹದ ಗೊಣಗಾಟ, ಖಿನ್ನವಿರಕ್ತಿ ಪ್ರಲಾಪಮಯ. ಇದು ಹೋಗಬೇಕು. ಇಂಥಹ ಕುಗ್ಗಿನ ಬಾಳ್ವೆ ಸಾಸೇಸರಿ. ಯಲ್ಲಿ ಸ್ವದೇಶವನ್ನು ಕಡೆಗಣಿಸಬಾರದು. ಹೀಗೆಯೇ ಬಡಮನಸ್ಸಿನಿಂದ - ಬಡಬಾಗ್ನಿಯಂತಿರುವ ಧೀಃಶಕ್ತಿಯನ್ನು ಕ್ಷುಲ್ಲಕಕಾರ್ಯಗಳಿಗೆ ಬಳಸಬಾರದು. ತಾರತಮ್ಯ ವಿವೇಚನೆ ಅಗತ್ಯ. ಆಗಲೇ ಜೀವಸ್ರೋತ್ಸಾಹ ಚಿಮ್ಮುತ್ತದೆ. ಪ್ರಗತಿಯಾಗುತ್ತದೆ.

ಸಂತೋಷವನ್ನು ಹೊರಗಿನಿಂದ ಗಳಿಸಲು ಸಾಧ್ಯವಾದರೂ ತಾತ್ಕಾಲಿಕ; ಶಾಶ್ವತ ಆನಂದ ಮನದಲ್ಲಿ ಸತ್ತ್ವದ ಊಟೆಯಂತೆ ಉಕ್ಕಬೇಕು. ಆಗಲೇ ಬೋಧನೆ ಸಾಧನೆ ಫಲಿಸುವುದು; ಜೊತೆಗೆ ಅಂತಃಸತ್ವ–ನಿತ್ಯವೂ ಹೊಮ್ಮಿ ನಿರಂತರ ನಲಿಯುವುದು.

ಆತ್ಮವಿಶ್ವಾಸದ ಶ್ರದ್ಧೆಯ ಮನೋವೃತ್ತಿ ನಮ್ಮದಾಗಬೇಕು. ಇಲ್ಲದಿದ್ದರೆ ಆರೆಮನಸ್ಸಿನ ಬದುಕು ಇಹಕ್ಕೆ ಸಾಲದು, ಪರಕ್ಕ ಮುಟ್ಟದು;

# ಮನದ ಬಡತನ

ಬಡ ಮನಸ್ಸು ಹೋಗಿ ಬಲಿಷ್ಟಮನ ಬರಬೇಕಾದರೆ ಶ್ರೀ ಡಿ. ವಿ. ಜಿ. ಅವರ ನುಡಿಯನ್ನು ಉದ್ಧರಿಸಬಹುದು.

ಹೋರು ಧೀರತೆಯಿಂದ,
ಮೋಡುತನದಿಂಬೇಡ
ವೈರಹಗೆತನ ಬೇಡ, ಹಿರಿನಿಯಮವಿರಲಿ
ವೈರಾಗ್ಯ ಕಾರುಣ್ಯ ಮೇಳನವೆ ಧೀರತನ
ಹೋರುದಾತ್ತತೆಯಿಂದ-ಮಂಕುತಿಮ್ಮ

ಬಾಳಿನಲ್ಲಿ ಬಡಮನಸ್ಸು ಬಂದಾಗ – ಆನಂದದಧ್ವನಿ ಕಡಿಮೆಯಾಗಿ ನಿರ್ವಿಣ್ಣತೆಯ ಧ್ವನಿ ಅತಿಯಾಗಿ – ಬಾಳಿನ 'ಹಿಗ್ಗು' ಮಾಯವಾಗುವುದು; ಇದಕ್ಕೆ ಪರಿಹಾರ ಸೋಲುಮನಸ್ಸು ಹೋಗಿ ಗೆಲುಮನಸ್ಸು ಬರಬೇಕು. ಜೀವನ ಸಂತೃಪ್ತಿ ಪಡೆಯುತ್ತದೆ. ನಷ್ಟವಾದ ಧೈರ್ಯ ತುಂಬುತ್ತದೆ.

ಮನೆಯ ಚಿಂತನೆಯಲ್ಲಿ ಊರಿನ ವಿಚಾರವನ್ನು ಮರೆಯಬಾರದು; ವಿಶ್ವದ ಆರಾಧನೆ

**'ಮತ್ತೀಗೆರೆ ಅನಂತು'**

ತುರಿಕಜ್ಜಿ ನಿನಗೆಂದು ಜಗಕದನು
ಸೋಕಿಪುದೇ?
ಹೆರರ ಕಿವಿಗೇಕೆರೆವೆ ನಿನ್ನ ಕರಕರೆಯ?
ಕೊರಗು ಕಾರ್ಪಣ್ಯಗಳು ಮನಕಂಟು
ಜಾಡ್ಯಗಳು
ನೆರೆಗದನು ಹಂಚದಿರು-ಮರುಳಮುನಿಯ
(ಮರುಳಮುನಿಯನ ಕಗ್ಗ)

ಮನದ ಅಂಟು ಜಾಡ್ಯಗಳನ್ನು ಇತರರಿಗೆ ಹಂಚಬಾರದು. ಇದೂ ಕೂಡ ಒಂದು ರೀತಿಯ ದುರ್ಬಲ ಚಿತ್ತವೇ.

ಬಡಮನಸ್ಸು ಏನನ್ನೂ ಸಾಧಿಸಲಾರದು; ಎಡರು – ತೊಡರುಗಳನ್ನು ಎದುರಿಸಲು ಸಾಧ್ಯವಾಗದು. ಹೃದಯದ ಒಳಚಿಲುಮೆಯನ್ನು ಬತ್ತಿಸಿಬಿಡುವುದು. ಆದುದರಿಂದ ಸರಸ, ಸಂತೋಷ, ನಿಸ್ವಾರ್ಥ ಸೇವೆ, ದೇವಕಾರ್ಯಗಳಿಗೆ ವಿಮುಖರಾಗದೆ ಮನಸ್ಸಿನ ನೆಮ್ಮದಿ ಕಾಪಾಡಿಕೊಳ್ಳಬೇಕು. ಜಗತ್ತಿನಲ್ಲಿ ಸುಖಪಡುವುದಕ್ಕೆ ಅವಕಾಶವಿದ್ದರೂ, ಜಗಳ ತಕರಾರು ಏಕೆ? ದುಗುಡವೇಕೆ?...ಇದಕ್ಕೆಲ್ಲಾ ಮನಸ್ಸಿನ ಇಕ್ಕಟ್ಟೇ ಕಾರಣವೆನ್ನಬಹುದು. ಬಾಳಿಗೆ ಬೆಲೆ ಬರ

ಬೇಕಾದರೆ ಬಾಳು "ಆತ್ಮಶಕ್ತಿಗಾಗಿ, ಆನಂದಕ್ಕಾಗಿ, ತೃಪ್ತಿಗಾಗಿ" ಎಂಬುದಾಗಿ ತಿಳಿಯಬೇಕು ಎನ್ನುತ್ತಾರೆ ದಾಸವರೇಣ್ಯರಾದ ಪುರಂದರದಾಸರು. ಆತ್ಮ ಬಲವಿಲ್ಲದವರು ಶ್ರೀಮಂತರಾಗಿದ್ದರೂ ಬಡವರೇ, ಆತ್ಮಬಲವುಳ್ಳವರು - ಬಡವರಾಗಿದ್ದರೂ ಶ್ರೀಮಂತರು.

ಮುರುಕವಿಲ್ಲದ ಹೃದಯ, ಅರಿಷಡ್ವರ್ಗದಿಂದ ತೊಳಲಾಟದ ಬಾಳು ಆತ್ಮೋನ್ನತಿಗೆ ಸಾಧನವಾಗಲಾರದು. ಇವೆಲ್ಲವನ್ನು ಮಿತ್ರವರ್ಗವನ್ನಾಗಿ ಮಾಡಿಕೊಳ್ಳಬೇಕು. ಇಲ್ಲವಾದರೆ ವಚನಕಾರ ಬಸವಣ್ಣನವರು–

'ಮಾಡಿ–ಮಾಡಿ ಕೆಟ್ಟರು ಮನವಿಲ್ಲದೆ

ನೀಡಿ–ನೀಡಿ ಕೆಟ್ಟರು ನಿಜವಿಲ್ಲದೆ' ಹೇಳಿದಂತೆ ಆಗಿಬಿಡುತ್ತದೆ.

ಶಾಂತಿಯಿಲ್ಲದವನಿಗೆ ಮನಸ್ಸೇ ಹೊರೆ, ವಿಚಾರವಿಲ್ಲದ ವ್ಯಕ್ತಿಗೆ ಶಾಸ್ತ್ರ ಹೊರೆ; ವ್ಯಸನಿಗೆ ತತ್ತ್ವಜ್ಞಾನ ಹೊರೆ; ಗೀತೆಯಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ವಿಶ್ವಾಸದಿಂದ "ಮನಸ್ಸಿನ ದೌರ್ಬಲ್ಯಕ್ಕೆ ತುತ್ತಾಗಬೇಡ, ಅದು ನಿನಗೆ ಯೋಗ್ಯವಲ್ಲ; ಈ ತುಚ್ಛವಾದ ಹೇಡಿತನವನ್ನು ಬಿಡು. ನೀನು ಶತ್ರುಗಳನ್ನು ಸಂಹರಿಸುವನು ಎಚ್ಚೆತ್ತುಕೋ"...... 'ಕ್ಲೈಬ್ಯಂ ಹೃದಯಃ ದೌರ್ಬಲ್ಯಂ' ಎಂದು ಅರ್ಜುನನ್ನು ಜೀವನದಲ್ಲಿ ಹುರುಪುಗೊಳಿಸಿ, ಬಾಳ ಹೊರೆಯನ್ನು ಹಗುರಮಾಡುತ್ತಾನೆ.

"ಹತಂ ಜ್ಞಾನಂ; ಕ್ರಿಯಾ ಶೂನ್ಯಂ

ಹತಾ ಚಾ ಜ್ಞಾನಿನಃ ಕ್ರಿಯಾ..."

ಕ್ರಿಯೆಯಿಲ್ಲದ ಬರಿಯ ತಿಳಿವು ನಷ್ಟ. ಹಾಗೇ ತಿಳಿವಿಲ್ಲದ ಕ್ರಿಯೆಯು ನಷ್ಟವೇ! ಎಂಬುದನ್ನು ಅರಿತು ಜೀವನ ನಡೆಸಬೇಕು.

ಬಾಳಿ ಬದುಕುವರು ಹಾಳು ಸುದ್ದಿಗಳಿಗೆ ಅಂಟಿಕೊಳ್ಳಬಾರದು. ಮನವನ್ನು ಗೆದ್ದು ಮನೆಯನ್ನು ಗೆಲ್ಲುವುದು ಕ್ಷೇಮ. ನಮ್ಮನ್ನು ಅರಿವುದು ಕೋಟಿ ಗುಣ!! ಪ್ರೀತಿ, ಜ್ಞಾನ, ಬೃಢಮನ, ನಿಷ್ಕಾಮ–ಈ ನಾಲ್ಕು ಹಿಗ್ಗಿನ ಜೀವನಕ್ಕೆ ಬುನಾದಿ. ಇವಕ್ಕೆ ಪೋಷಕವಾಗಿ ಬಾಳು ವಿಸ್ತಾರದಿಂದ, ವೈವಿಧ್ಯತೆಯಿಂದ ಕೂಡಿರಬೇಕು.

"ಹಿಗ್ಗೇ ಜೀವ–ಕುಗ್ಗೇ ಸಾವು" ಎಂ ವಿವೇಕಾನಂದರ ನುಡಿಯನ್ನು ಯಾರು ವಿ ಜನಾಪೂರ್ವಕವಾಗಿ ಅರಿಯುತ್ತಾರೋ ಅ ರಿಗೆ ಬಾಳೇ ಕಲ್ಪವೃಕ್ಷವಾಗುತ್ತದೆ. ಕಾ ಕರ್ಮ, ಕಾಮ ಇವುಗಳನ್ನು ಸರಿಯಾ ಬಳಸದವರು ಬಡಮನಸ್ಸಿನವರೇ; ಹೀನ ಮನವನ್ನು ಹೋಗಲಾಡಿಸಬೇಕಾದ ಕಾಲವನ್ನು ಸುವರ್ಣ ಕಾಲವಾಗಿಯು ಕರ್ಮವನ್ನು – ಕೌಶಲವಾಗಿಯೂ, ಕಾ ವನ್ನು–ನಿಷ್ಕಾಮವಾಗಿ ಬಳಸಬೇಕ ಇದಕ್ಕೆ ಶೀಲಶಕ್ತಿ ಅವಶ್ಯಕ. ಜೀವ–ಶೀ ಶಕ್ತಿಯಿಂದ 'ಶಿವ'ವಾದಾಗ 'ಸುಂದರ'.

"ಜಗತ್ತನ್ನು ಒಂದು ಬೃಹತ್ ಪಾ ಶಾಲೆ" ಎಂದು ತಿಳಿಯ ಮಹತ್ವದ ಚಿಂತ ಗಳನ್ನು ಆಶ್ರಯಿಸಿ ಪೂರ್ಣತೆ ಪಡೆ ಬೇಕು. ಇಂಥಹ ವಿಚಾರಗಳನ್ನು ಅರಿಯ ಸಾಮರ್ಥ್ಯವಿಲ್ಲದ ಮನಸ್ಸೇ ಬ ಮನಸ್ಸು"

★

## ತಿರುಮಲೆಯಲ್ಲಿ ಮೂರು ನೀರಿನ ಯೋಜನೆಗಳು

ತಿರುಮಲೆಯ ವೃಕ್ಷ ಸಂಪತ್ತನ್ನು ಹೆಚ್ಚಿಸಿ ಪ್ರಕೃತಿ ಸಮತೋಲನವನ್ನು ಕಾಯ್ದು ಕೊಳ್ಳಲು ಮೂರು ನೀರಿನ ಯೋಜನೆಗಳನ್ನು ಕೈಗೆತ್ತಿ ಕೊಳ್ಳಲು ತಿ. ತಿ. ದೇ. ತೀರ್ಮಾನಿಸಿದೆ. ಆಂಧ್ರ ಪ್ರದೇಶದ ಸಣ್ಣ ನೀರಾವರೀ ಶಾಖೆಯ ಆಧ್ವರ್ಯದಲ್ಲಿ ಈ ಯೋಜನೆಗಳು ಕಾರ್ಯಗತ ಗೊಳ್ಳಲಿವೆ. ತಿರುಪತಿಯಿಂದ ತಿರುಮಲೆಗೆ ಹೋಗುವ ಮೊದಲ ಘಾಟ್ ರಸ್ತೆಯಲ್ಲಿ 3 4 ಕಿ.ಮೀ. ದೂರದಲ್ಲಿ ಕಪಿಲ ತೀರ್ಥ ಪ್ರವಾಹಕ್ಕೆ 39. 8 ಲಕ್ಷರೂಗಳ ವ್ಯಯದಿಂದ ಆಣೆಕಟ್ಟೆ ನಿರ್ಮಾಣ ಮಾಡುವ ಕೆಲಸ ಆರಂಭವಾಗಿದೆ. ಇದರ ಉದ್ದ 130 ಮೀಟರ್ ಹಾಗೂ ಎತ್ತರ 13 ಮೀಟರ್‌ಗಳು. ಕಾಲುಹಾದಿಯಲ್ಲಿ ಶಂಖ ಚಕ್ರಗಳಿರುವ ಗಾಳಿ ಗೋಪುರದ ಬಳಿಯ ಮೂಲವಾಡಿಗುಂಡಂ ಪ್ರವಾಹಕ್ಕೆ ಬಂದು ಆಣೆ ಕಟ್ಟೆಯನ್ನೂ, ಗೋಗರ್ಭಂ ಡ್ಯಾಂ ಕೆಳಭಾಗದಲ್ಲಿ ಮತ್ತೊಂದು ಆಣೆಕಟ್ಟೆಯನ್ನೂ ನಿರ್ಮಿಸಲು ಯೋಜಿಸಲಾಗಿದೆ. ಇಲ್ಲೆಲ್ಲ ಸಂಗ್ರಹವಾಗುವ ನೀರಿನಿಂದ ತಿರುಮಲೆಯಲ್ಲಿ ಹಸಿರು ಕ್ರಾಂತಿಯನ್ನುಂಟು ಮಾಡಲಾಗುವುದು. ಈ ವಿಷಯವನ್ನು ಸಣ್ಣ ನೀರಾವರಿ ಯೋಜನೆಗಳ ಮುಖ್ಯ ಇಂಜನೀಯರ್ ಶ್ರೀ ಹನುಮಂತರಾವ್ ಅವರು ತಿಳಿಸಿದ್ದಾರೆ

## ತಿರುಪತಿಯ ಯಾತ್ರಿಕರಿಗೆ ಹೆಚ್ಚಿನ ಬಸ್ ಸೌಲಭ್ಯ

ಆಂಧ್ರಪ್ರದೇಶ ರಸ್ತೆ ಸಾರಿಗೆ ಸಂಸ್ಥೆ, ತಿರುಮಲೆಯಿಂದ ಮದ್ರಾಸಿಗೆ ಅಡ್ವಾನ್ಸ್ ರಿಸರ್ವೇಷನ್ ಹಾಗೂ ಲಿಂಕ್ ಟಿಕೆಟ್‌ಗಳನ್ನು ನೀಡುವುದೆಂದು ಅದರ ವಿಭಾಗೀಯ ಮ್ಯಾನೇಜರ್ ಮಲ್ಲಣ್ಣ ತಿಳಿಸಿದ್ದಾರೆ. ಎರಡು ಮೂರು ತಿಂಗಳುಗಳಲ್ಲಿ ಶ್ರೀ ಕಾಳಹಸ್ತಿಯಿಂದ ಬೆಂಗಳೂರಿಗೆ ಬಸ್ ಪ್ರವೇಶಗೊಳಿಸುವುದಾಗಿಯೂ, ತಿರುಪತಿಯಿಂದ ಬೆಂಗಳೂರಿಗೆ ಮತ್ತೊಂದು ಬಸ್ ನಡೆಸುವುದಾಗಿಯೂ, ಪುತ್ತೂರಿನಿಂದ ಬೆಂಗಳೂರಿಗೆ ಈಗಿರುವುದರೊಂದಿಗೆ ಇನ್ನೊಂದು ಬಸ್ ನಡೆಸುವುದಾಗಿಯೂ ಅವರು ತಿಳಿಸುತ್ತ, ಶ್ರೀ ಕಾಳಹಸ್ತಿಯಿಂದ ಸೇಲಂಗೆ ಹೋಗುವ ಬಸ್‌ನಲ್ಲಿ ತಿರುಪತಿಗಾಗಿ 20 ಸೀಟ್‌ಗಳನ್ನು ರಿಸರ್ವ್ ಮಾಡಲಾಗಿದೆಯೆಂದು ಹೇಳಿದರು.

ತಿರುಮಲೆಯಿಂದ ಪಾಪನಾಶಿನಿಗೆ ಮತ್ತೆರಡು ಬಸ್‌ಗಳನ್ನು ನಡೆಸುವುದಾಗಿ ಹೇಳಿದ ಅವರು, ತಿರುಮಲೆಯಲ್ಲಿ ನಿರ್ಮಾಣವಾಗುತ್ತಿರುವ ಬಸ್ ನಿಲ್ದಾಣದಲ್ಲಿ 15 ಕೋಣೆಗಳಿರುವುವೆಂದೂ, ಇವುಗಳಲ್ಲಿ ಹನ್ನೆರಡು ಕೋಣೆಗಳು ಘಾಟ್ ರಸ್ತೆ



ಸಾರಿಗೆಗೂ 3 ಕೋಣೆಗಳನ್ನು ದೂರಪ್ರಾಂತದ ಸಾರಿಗೆಗೂ ವಿನಿಯೋಗಿಸಲಾಗುವುದೆಂದೂ ಇದರಿಂದಾಗಿ ಏಕಕಾಲದಲ್ಲಿ 900 ಮಂದಿ ಯಾತ್ರಿಕರು ಪ್ರಯಾಣ ಮಾಡಬಹುದೆಂದೂ ತಿಳಿಸಿದ್ದಾರೆ

## ತಿರುಮಲೆಯಲ್ಲಿ ಉಚಿತ ಕ್ಷೌರಕರ್ಮ

ತಿರುಮಲೆಯ ಕಲ್ಯಾಣ ಕಟ್ಟೆಗಳಲ್ಲಿ ತಲೆಗೂದಲನ್ನು ಅರ್ಪಿಸುವವರಿಗೆ ಕ್ಷೌರ ಶುಲ್ಕವನ್ನು ಮಾಫೀ ಮಾಡಲಾಗಿದೆ. ಏಪ್ರಿಲ್ 18 ರ ಶುಕ್ರವಾರ ಮಧ್ಯರಾತ್ರಿಯಿಂದ ಆಚರಣೆಗೆ ಬಂದ ಈ ಉಚಿತ ಕ್ಷೌರ ಕರ್ಮದಲ್ಲಿ ಶನಿವಾರ ರಾತ್ರಿ 12 ಗಂಟೆಯ ಹೊತ್ತಿಗೆ 16100 ಮಂದಿ ತಲೆಗೂದಲನ್ನು ಅರ್ಪಿಸಿದರು. ಕಲ್ಯಾಣ ಕಟ್ಟೆಯಲ್ಲಿ ತಲೆಗೂದಲನ್ನು ಅರ್ಪಿಸಬಯಸುವವರು ಸರತಿಯ ಸಾಲಿನಲ್ಲಿ ಸೇರಿ ಉಚಿತ ಚೀಟಿಯನ್ನು ಪಡೆದು ಒಳ ಹೋಗಿ ಸಂಬಂಧಿಸಿದ ಕ್ಷೌರಿಕನ ಬಳಿ ತಲೆಗೂದಲನ್ನು ತೆಗೆಸಬೇಕು. ಯಾರಿಗೇ ಆಗಲೀ ದಕ್ಷಿಣೆಯನ್ನು ನೀಡಬೇಕಿಲ್ಲ.

ಆದರೆ ಕಾಟೇಜಗಳ ಬಳಿಗೇ ಕ್ಷೌರಿಕರನ್ನು ಕರೆಸಿ ಕೊಳ್ಳುವವರು ಪ್ರತಿ ವ್ಯಕ್ತಿಗೂ ಐದು ರೂಗಳ ಕ್ಷೌರ ಶುಲ್ಕವನ್ನು ನೀಡಬೇಕಾಗುತ್ತದೆ.

## ತಿರುಪತಿಯಲ್ಲಿ ವಿಶಿಷ್ಟ ಚಿಕಿತ್ಸಾಲಯ

ಆಂಧ್ರ ಪ್ರದೇಶದ ಮುಖ್ಯ ಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರು ತಿರುಪತಿಯಲ್ಲಿ ತಿ. ತಿ. ದೇವಸ್ಥಾನಗಳು ನಿರ್ಮಿಸಲಿರುವ ವಿಶಿಷ್ಟ ಚಿಕಿತ್ಸಾಲಯಕ್ಕೆ ಏಪ್ರಿಲ್ 18ರಂದು ಶಂಕುಸ್ಥಾಪನೆಯನ್ನು ಮಾಡಿದರು.

ವಿಶಿಷ್ಟ ಚಿಕಿತ್ಸಾಲಯದಿಂದಾಗಿ ಸರ್ವತೋಮುಖ ಅಭಿವೃದ್ಧಿ ಆಗುವುದೆಂದೂ, ಇದು ಸಾರ್ವಜನಿಕರಿಗೆ ಅದರಲ್ಲೂ ಶ್ರೀಸಾಮಾನ್ಯರಿಗೆ, ದೂರದೂರುಗಳಿಗೆ ಹೋಗಿ ಚಿಕಿತ್ಸೆಗಾಗಿ ಹಣ ವೆಚ್ಚ ಮಾಡುವುದನ್ನು ತಪ್ಪಿಸುವುದೆಂದೂ ನುಡಿದರು.

ತಿ. ತಿ. ದೇ. ನಿರ್ಮಿಸುತ್ತಿರುವ ಈ ವಿಶಿಷ್ಟ ಚಿಕಿತ್ಸಾಲಯ ಆಧುನಿಕ ತಾಂತ್ರಿಕ ಪರಿಕರಗಳಿಂದ ಕೂಡಿದ್ದು, ಹೊಸ ವೈದ್ಯಕೀಯ ಶಾಖೆಗಳಾದ ಕಾರ್ಡಿಯಾಲಜಿ, ನೆಫ್ರಾಲಜಿ, ನ್ಯೂರಾಲಜಿ, ಮೊದಲಾದವುಗಳಲ್ಲೂ ತೀವ್ರ ವಿಶ್ಲೇಷಣ, ಚಿಕಿತ್ಸೆಗಳಿಗೆ ಅವಕಾಶಗಳಿವೆ.

ಮುಖ್ಯಮಂತ್ರಿಗಳು ತದನಂತರ ತಿ. ತಿ. ದೇ. ಗಳ ಶ್ರೀವೆಂಕಟೇಶ್ವರ ಆಯುರ್ವೇದಿಕ್ ಕಾಲೇಜಿಗೆ ಶಂಕುಸ್ಥಾಪನೆ ಮಾಡಿ, ತಿ. ತಿ. ದೇ. ಗಳು ಕೈಗೆತ್ತಿ

## ಆಸ್ಥಾನ ವಿದ್ವಾಂಸ ಪಂಡಿತ ಜಗನ್ನಾಥಾಚಾರ್ಯರ ನಿಧನ

ತಿ. ತಿ. ದೇ. ಆಸ್ಥಾನ ಪಂಡಿತರಾಗಿ 1955 ರಿಂದ ಕೆಲಸ ನಿರ್ವಹಿಸಿದ ಆಗಮ ಶಾಸ್ತ್ರದಲ್ಲಿ ಅಗ್ರಗಣ್ಯರಾದ ಮಹಾವಿದ್ವಾನ್ ಅಪ್ಪಿಕಟ್ಲ ಜಗನ್ನಾಥಾಚಾರ್ಯರು ಕಳೆದ ಏಪ್ರಿಲ್ 19 ರಂದು ಮಧ್ಯಾಹ್ನ ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ

ಮೊದಲಿಗೆ ಪೀಠಾಪುರಂ ಸಂಸ್ಥಾನದ ಆಸ್ಥಾನ ವಿದ್ವಾಂಸರಾಗಿದ್ದ ಶ್ರೀಯುತರು 96 ವರ್ಷದ ಹಿಂದೆ ಗುಂಟೂರು ಜಿಲ್ಲೆಯ ಬಾಪಟ್ಲ ಪ್ರಾಂತದ ಚೆಂದೊಲು ಗ್ರಾಮದಲ್ಲಿ ಜನಿಸಿದರು. ವೈಖಾನಸ ಕಲ್ಪಸೂತ್ರಗಳನ್ನು ಸಂಪಾದಿಸಿ, ತಿರುಮಲೆಯ ಸ್ವಾಮಿ ಉತ್ಸವಗಳನ್ನೂ ವಿವರಿಸುವ ಶ್ರೀ ವೆಂಕಟೇಶ್ವರ ವೈಭವಂ ಕೃತಿಯನ್ನು ರಚಿಸಿದ್ದರು. ಅನೇಕ ಪೀಠಾಧಿಪತಿಗಳಿಂದಲೂ, ವಿದ್ವತ್ ಸಭೆಗಳಿಂದಲೂ, ಸಮ್ಮೇಳನಗಳಲ್ಲೂ ಸನ್ಮಾನಿತರಾದ ಶ್ರೀಯುತರು ಅಸಾಧ್ಯಾರಣ ಪ್ರತಿಭಾವಂತರೂ, ಆಳವಾದ ವ್ಯಾಸಂಗಾಸಕ್ತರೂ ಆಗಿದ್ದರು.

ಅವರ ಮರಣದಿಂದಾಗಿ ಶಾಸ್ತ್ರಾಕಾಶದ ನಕ್ಷತ್ರವೊಂದು ಕಣ್ಮರೆಯಾದಂತಾಗಿದೆ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯುವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ, ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಕೊಂಡಿರುವ ಅಲಿಪಿರಿ ಕಪಿಲ ತೀರ್ಥಗಳ ನಡುವಣ 'ದಿವ್ಯಾರಾಮ' ಯೋಜನೆಗೆ ಶಂಕುಸ್ಥಾಪನೆ ಮಾಡಿದರು. ಈ ಯೋಜನೆಯಂತೆ ತಿರುಪತಿ, ತಿರುಮಲೆಗಳಲ್ಲಿ ಉದ್ಯಾನವನಗಳು, ತಪೋವನಗಳನ್ನು ಬೆಳೆಸಿ ಪಾವಿತ್ರ್ಯವನ್ನೂ, ಪರಿಶುಭ್ರತೆಯನ್ನೂ, ಸೌಂದರ್ಯವನ್ನೂ ಹೆಚ್ಚುಗೊಳಿಸಲಾಗುವುದು.

## ವಿಕಲಾಂಗ ಸಂಕ್ಷೇಮ ಕೇಂದ್ರ ವಿಸ್ತರಣೆ

ಶ್ರೀ ಬಾಲಾಜೀ ವಿಕಲಾಂಗ ಸಂಕ್ಷೇಮ ಕೇಂದ್ರವನ್ನು ವಿಸ್ತರಣಗೊಳಿಸಲಾಗಿದೆ. ವಿಸ್ತರಣವನ್ನು ಏಪ್ರಿಲ್ 7 ರಂದು ಉದ್ಘಾಟಿಸಿದ ಆಂಧ್ರಪ್ರದೇಶದ ಆರೋಗ್ಯಶಾಖಾಮಂತ್ರಿ ಡಾ॥ ಎಮ್. ಎಸ್. ಕೋಟೇಶ್ವರರಾವ್ ಅವರು ಫಿಸಿಯೋ ಥೆರಪಿ ಚಿಕಿತ್ಸೆಯ ಚಲನಚಿತ್ರವನ್ನು ತೆಗೆಯಬೇಕೆಂದು ಸಲಹೆನೀಡಿದರು. ಅವರು ತಿ. ತಿ. ದೇ. ಹಾಗೂ ಸಂಕ್ಷೇಮಕೇಂದ್ರದ ಚಿಕಿತ್ಸಾತಜ್ಞ ಶ್ರೀ ಡಾ॥ ಸಿ. ವ್ಯಾಘೇಶ್ವರುಡು ಅವರುಗಳ ಸೇವಾ ಮನೋಭಾವವನ್ನು ಶ್ಲಾಘಿಸಿದರು.

ಅಧ್ಯಕ್ಷತೆ ವಹಿಸಿದ್ದ ಎಸ್. ವಿ. ಆರ್. ಆರ್. ಆಸ್ಪತ್ರೆಯ ಸೂಪರಿಂಟೆಂಡೆಂಟ್ ಡಾ॥ ವೆಂಕಟಿಸ್ವಾಮಿ ಅವರು ತಿ. ತಿ. ದೇ. ಗಳ ಮಾನವೋಪಯೋಗಿ ಕಾರ್ಯಕ್ರಮಗಳ ಆಸ್ತಿಕೆಯನ್ನು ಪ್ರಶಂಸಿದರು.

ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಸಂಕ್ಷೇಮಕೇಂದ್ರದ ಎಲ್ಲ ಯೋಜನೆಗಳನ್ನು ಕಾರ್ಯಗತಗೊಳಿಸಲು ಕ್ರಮಗಳನ್ನು ಕೈಗೊಳ್ಳಲಾಗುವುದೆಂದು ಭರವಸೆ ನೀಡಿದರು.

ಡಾ॥ ಸಿ. ವ್ಯಾಘ್ರೇಶ್ವರುಡು ಅವರು, ಬಾಲಾಜಿ ವಿಕಲಾಂಗ ಸಂಕ್ಷೇಮ ಕೇಂದ್ರದ ಇಂಜನೀಯರಿಂಗ್ ಕೆಲಸಗಳಿಗೆ ಆದ್ಯತೆ ನೀಡಬೇಕೆಂದು ಕರೆ ನೀಡಿದರು. ಶ್ರೀಮತಿ ವಿಮಲಾ ಲಕ್ಷ್ಮೀನಾರಾಯಣ ಬಹುಮಾನ ವಿತರಣೆ ಮಾಡಿದರು. ಡಾ॥ ಶ್ರೀ ರಾಮಮೂರ್ತಿ ಅವರು ವಂದನಾರ್ಪಣೆ ಮಾಡಿದರು.

## ರೂಯಾ ಆಸ್ಪತ್ರೆಯಲ್ಲಿ ಕಾರ್ಡಿಯಾಲಜಿ ವಿಭಾಗ

ತಿರುಪತಿಯ ರೂಯಾ ಆಸ್ಪತ್ರೆಯಲ್ಲಿ 18 ಲಕ್ಷ ರೂಗಳ ವೆಚ್ಚದಲ್ಲಿ ವ್ಯವಸ್ಥೆಗೊಳಿಸಲಾದ 40 ಹಾಸಿಗೆಗಳ ಕಾರ್ಡಿಯಾಲಜಿ ವಿಭಾಗವನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಮಾರ್ಚ್ 31 ರಂದು ಉದ್ಘಾಟಿಸಿದರು.

ಆಂಧ್ರ ಪ್ರದೇಶದ ವೈದ್ಯ ಶಿಕ್ಷಣದ ನಿರ್ದೇಶಕ ಡಾ॥ ಸಿ. ಆರ್. ಆರ್. ಎಮ್. ರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಮಾತನಾಡುತ್ತ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ತಿರುಪತಿಯಲ್ಲಿ ಮೆದುಳಿನ ಆಸ್ಪತ್ರೆಯನ್ನು ಸ್ಥಾಪಿಸಲು ತಿ. ತಿ. ದೇ. ಆರ್ಥಿಕ ನೆರವು ನೀಡಲು ಸಿದ್ಧವಿದೆಯೆಂದರು.

ಆಂಧ್ರ ಪ್ರದೇಶದ ಶಿಕ್ಷಣ ಶಾಖಾಮಂತ್ರಿ ಶ್ರೀ ಜಿ. ಮುದ್ದುಕೃಷ್ಣಮನಾಯುಡು ಅವರು 8.5 ಲಕ್ಷ ರೂಗಳ ಟ್ರೊಮಟಾಲಜಿ ವಿಸ್ತರಣವನ್ನು ಉದ್ಘಾಟನೆ ಮಾಡಿದರು.

ಡಾ॥ ಸುರಭಿ ನರಸಿಂಹಮೂರ್ತಿ ಅವರು ಮಾತನಾಡುತ್ತ ಕಾರ್ಡಿಯಾಲಜಿ ವಿಭಾಗಕ್ಕೆ 1979 ರಲ್ಲಿ ಶಂಕುಸ್ಥಾಪನೆ ಆಯಿತೆಂದೂ, ಆಂಧ್ರ ಪ್ರದೇಶದ ಸರ್ಕಾರ ಹತ್ತು ಲಕ್ಷ ರೂಗಳ ವಂತಿಗೆಯನ್ನೂ ತಿ. ತಿ. ದೇ. ಗಳೂ ಅಷ್ಟೇ ಧನವನ್ನೂ ನೀಡಿದೆಯೆಂದೂ ತಿಳಿಸಿದರು.

## ಅನ್ನಮಾಚಾರ್ಯ ವರ್ಧಂತಿ ಉತ್ಸವಗಳು

ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಏಪ್ರಿಲ್ 6 ರಿಂದ12 ರವರೆಗೆ ಒಂದು ವಾರ ಕಾಲ ಶ್ರೀ ಅನ್ನಮಾಚಾರ್ಯ ವರ್ಧಂತಿ ಉತ್ಸವಗಳು ಅತಿ ಸಡಗರದಿಂದ ಸಕಲ ಜನಾನಂದಕರವಾಗಿ ನಡೆದವು.

ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಉದ್ಘಾಟಿಸಿದ ಉತ್ಸವಗಳಲ್ಲಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ಸಂಗೀತ, ನೃತ್ಯ, ಹರಿಕಥೆಗಳೂ ಉಪನ್ಯಾಸಗಳೂ ನಡೆದು, ಶ್ರೀ ವಿದ್ವಾನ್ ವಿಶ್ವಂ, ಶ್ರೀ ಎಲ್ಲಂರಾಜು ಶ್ರೀನಿವಾಸರಾವ್, ಶ್ರೀ ಗೌರಿಪೆದ್ದಿ ರಾಮಸುಬ್ಬಶರ್ಮ, ಶ್ರೀ ಸಮುದ್ರಾಲ ಲಕ್ಷ್ಮಣಯ್ಯ—ಮೊದಲಾದ ಪಂಡಿತರು ಉಪನ್ಯಾಸ ಮಾಡಿದರು. ಶ್ರೀ ನೂಕಲ ಚಿನ್ನ ಸತ್ಯನಾರಾಯಣ, ಶ್ರೀ ನೆದುನೂರಿ ಕೃಷ್ಣ ಮೂರ್ತಿ, ಶ್ರೀ ಲೋಕನಾಥನ್, ಶ್ರೀಮತಿ ಶೋಭಾರಾಜು ಮೊದಲಾದವರ ಸಂಗೀತ ಸಭೆಗಳೂ, ಶ್ರೀ ಅಮ್ಮುಲ ವಿಶ್ವನಾಥಭಾಗವತರ್ ಮೊದಲಾದವರ ಹರಿಕಥೆಗಳೂ ನಡೆದು, ಕಡೆಯ ದಿನ ತಿ. ತಿ. ದೇ. ಸಹಕಾರ್ಯನಿರ್ಹಣಾಧಿಕಾರಿ ಶ್ರೀ ಚಕ್ರಧರರಾವ್ ಅವರ ಅಧ್ಯಕ್ಷತೆಯಲ್ಲಿ ಸಮಾರೋಪ ನಡೆಯಿತು.

## ಅನ್ನಮಾಚಾರ್ಯ ಜಯಂತಿ ಸಿದ್ಧತೆಗಳು

1986 ರ ಮೇ ತಿಂಗಳಿನಲ್ಲಿ ಅನ್ನಮಾಚಾರ್ಯರ 578 ನೇ ಹುಟ್ಟು ಹಬ್ಬವನ್ನು ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯ ಸಂಗೀತೋತ್ಸವ ರೂಪದಲ್ಲಿ 9 ದಿನಗಳ ಕಾಲ ನಡೆಸಲು ಸಕಲಸಿದ್ಧತೆಗಳೂ ನಡೆದಿವೆ.

ಕರ್ನಾಟಕದ ಮುಖ್ಯಮಂತ್ರಿ ಶ್ರೀರಾಮಕೃಷ್ಣ ಹೆಗ್ಗಡೆ, ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್, ಶ್ರೀಮತಿ ವಿಜಯ ರಾಜೇ ಸಿಂಧಿಯಾ ಮೊದಲಾದವರು ಉದ್ಘಾಟನೆಯಲ್ಲಿ ಪಾಲುಗೊಳ್ಳುವರೆಂದೂ, ಪ್ರತಿದಿನ ಬೆಳಗಿನ ಸಭೆಗಳಲ್ಲಿ ಸರ್ವಶ್ರೀ ಆತ್ರೇಯ, ಆರುದ್ರ, ವೇಟೂರಿ ಆನಂದಮೂರ್ತಿ, ಆರ್. ಎ. ಜಯಂತ, ಮೊದಲಾದವರ ಉಪನ್ಯಾಸಗಳೂ ಖ್ಯಾತಸಂಗೀತ ವಿದ್ವಾಂಸರಾದ ಶ್ರೀಮತಿಯರಾದ ಸುಗಂಧ ರಾಮನ್, ಪದ್ಮಾಮೂರ್ತಿ, ಡಾ॥ ಸೀತಾ, ಸರ್ವಶ್ರೀ ಪಿ. ಆರ್. ರಾಜಗೋಪಾಲಯ್ಯರ್, ಎಮ್.ಸಿ. ನರಸಿಂಹಾಚಾರ್ಯಲು, ಕೆ. ವೀರಭದ್ರ ಶಾಸ್ತ್ರಿ, ಎಸ್. ಆರ್. ಜಾನಕೀರಾಮನ್ ಮೊದಲಾದವರು ಕರ್ನಾಟಕ ಸಂಗೀತ, ಅನ್ನಮಾಚಾರ್ಯ ಕೃತಿಗಳ ಬಗ್ಗೆ ವಿವರಿಸುವರು.

ಖ್ಯಾತ ಸಂಗೀತಜ್ಞರಾದ ಸರ್ವಶ್ರೀ ನೆದುನೂರಿ ಕೃಷ್ಣಮೂರ್ತಿ, ಭೀಮಸೇನಜೋಷಿ, ಜೇಸುದಾಸ್ ಅನ್ನವರಪು ರಾಮಸ್ವಾಮಿ, ಉಸ್ತಾದ್ ಅಬ್ದುಲ್ ಹಲೀಮ್ ಜಾಫರ್‌ಖಾನ್, ಸಿಕ್ಕಿಲ್ ಸೋದರಿಯರು, ಶ್ರೀಮತಿಯರಾದ ಮಣಿಕೃಷ್ಣಸ್ವಾಮಿ, ಎಂ. ಎಲ್. ವಸಂತಕುಮಾರಿ, ಪರ್ವೀನ್ ಸುಲ್ತಾನಾ, ವಾಣೀಜಯರಾಂ ಶ್ರೀ ಶ್ರೀ ವಿದ್ಯಾಭೂಷಣ ತೀರ್ಥ ಸ್ವಾಮೀಜೀ ಮೊದಲಾದವರು ಸಂಗೀತ ಸಭೆಗಳನ್ನು ನಡೆಸಿಕೊಡುವರು.

ತೆಲುಗಿನ ಅನ್ನಮಾಚಾರ್ಯರ ಕೃತಿಗಳು, ತಮಿಳಿನ ಆಳ್ವಾರರ ಪಾಶುರಗಳು, ಕನ್ನಡ ಪುರಂದರದಾಸ ಹಾಗೂ ಇತರ ಹರಿದಾಸರ ಕೃತಿಗಳು, ಸಂಸ್ಕೃತದ ಶ್ರೀವೆಂಕಟೇಶ್ವರಸ್ವಾಮಿ ಸಹಸ್ರನಾಮ ಮೊದಲಾದ 12 ಕ್ಯಾಸೆಟ್‌ಗಳನ್ನೂ ಬಿಡುಗಡೆ ಮಾಡಲಾಗುವುದು. ಹಲವಾರು ಧಾರ್ಮಿಕ ಕೃತಿಗಳನ್ನೂ ಈ ಸಂದರ್ಭದಲ್ಲಿ ಹೊರತರಲಾಗುವುದು.

## ಮುಂದಿನ ಸಂಚಿಕೆಯಲ್ಲಿ .... .... ....

ಸಪ್ತಗಿರಿ. ಜೂನ್ — 1986

**ಕೆಂಗಲ್ ಹನುಮಂತರಾಯಸ್ವಾಮಿ**
– ಪು. ಶ್ರೀಕಂಠಾಚಾರ್ಯ

**ಆಳ್ವಾರುಗಳು- ದಿವ್ಯಕ್ಷೇತ್ರಗಳು**
– ಸಿ. ಗೋವಿಂದಾಚಾರ್

**ಪುರಾಣಸಾಹಿತ್ಯ**
– ಡಿ. ಕೃಷ್ಣೈಯಂಗಾರ್

**ಸಿಂಹಾಸನದಿಂದ ದರ್ಭಾಸನಕ್ಕೆ**
– ಪಂಢರೀನಾಥ ಚಾರ್ಯ ಗಲಗಲಿ

**ತೇನ ವಿನಾ ತೃಣಮಪಿ....**
– ಪಿ. ವಿ. ಕೃಷ್ಣತಂತ್ರಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1-00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12-00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

## ತಿಂಗಳಿನ ಮುಖ್ಯದಿನಗಳು

### ಮೇ 1986

| | | |
|---|---|---|
| 1. | ಭಾನುವಾರ | ಹನುಮಜ್ಜಯಂತಿ |
| 15. | ಭಾನುವಾರ | ಮಿಥುನ ಸಂಕ್ರಮಣ |
| 17. | ಮಂಗಳವಾರ | ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವಾರಂಭ |
| 20. | ಶುಕ್ರವಾರ | ನಾಥಮುನಿಗಳ ವರ್ಷ ತಿರುನಕ್ಷತ್ರ |
| 21. | ಶನಿವಾರ | ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವ ಸಮಾಪ್ತಿ |
| 27. | ಶುಕ್ರವಾರ | ತಿರುಚಾನೂರು ಶ್ರೀ ಸುಂದರ ರಾಜಸ್ವಾಮಿ ಅವತಾರೋತ್ಸವಾರಂಭ |
| 29. | ಭಾನುವಾರ | ತಿರುಚಾನೂರು ಶ್ರೀ ಸುಂದರರಾಜಸ್ವಾಮಿ ಅವತಾರೋತ್ಸವ ಸಮಾಪ್ತಿ |

## ವಿಶ್ವ ಶಾಂತಿಗೆ ರಾಮಾಯಣದ ಆದರ್ಶ

ರಾಮಾಯಣದ ಎರಡನೇ ವಿಶ್ವ ಸಮ್ಮೇಳನವು ವಿಶ್ವದಲ್ಲಿ ಶ್ರೀರಾಮನ ಬೋಧನೆಯನ್ನು ಹರಡುವುದರ ಮೂಲಕ ಶಾಂತಿಯನ್ನು ತರಲು ಕಟಿಬದ್ಧ ತೀರ್ಮಾನವನ್ನು ತೆಗೆದು ಕೊಂಡಿದೆ.

ಬಾಂಕಾಕ್‌ನ ಥಾಯ್-ಭಾರತ ಸಂಸ್ಕೃ[illegible] ವೇದಿಕೆಯಿಂದ ನಾಲ್ಕು ದಿನಗಳ ಕಾಲ ವ್ಯವಸ್ಥಿ[illegible] ವಾದ ರಾಮಾಯಣದ ಎರಡನೇ ವಿಶ್ವಸಮ್ಮೇಳ[illegible] ದಲ್ಲಿ ಸೋವಿಯತ್ ದೇಶ, ನೇಪಾಳ, ಶ್ರೀಲಂಕಾ ಕೆನಡಾ, ಭಾರತಗಳ, ಹಿಂದಿ ಸಂಸ್ಕೃತ ವಿದ್ವಾ[illegible] ಸರು ಪಾಲುಗೊಂಡರು. ಈ ಸಮ್ಮೇಳನವು ಭಾರತದ ಸಾಂಸ್ಕೃತಿಕ ಮಂಡಳಿಯವರಿಂದ ಆ[illegible] ರಾಮಲೀಲಾ ಪ್ರದರ್ಶನದಿಂದ ಆರಂಭವಾಯಿತು

ಭಯ, ಹಾಗೂ ರೌದ್ರಗಳಿಂದ ಕೂಡಿದ ವಿಶ್ವ[illegible] ದಲ್ಲಿ ಶಾಂತಿ, ಸಹನೆ ಸೌಹಾರ್ದಗಳಿಗಾಗಿ ಕ[illegible] ನೀಡುತ್ತ ವಿಶ್ವ ಸಾಹಿತ್ಯ ಸಂಸ್ಕೃತ ಸಂಸ್ಥಾನ[illegible] ಕಾರ್ಯದರ್ಶಿ ಶ್ರೀ ಲಲ್ಲನ್ ಪ್ರಸಾದ ವ್ಯಾ[illegible] ಅವರು ಸಮ್ಮೇಳನವನ್ನು ಉದ್ಘಾಟಿಸಿದರು.

ಸಾಹಿತ್ಯಕ ಹಾಗೂ ಸಾಂಸ್ಕೃತಿಕ ದೃಷ್ಟಿಗಳಿಂ[illegible] ರಾಮಾಯಣವು ಏಕೀಕರಣದ ಹಿರಿಯ ಶಕ್ತಿ[illegible] ಯೆಂದೂ, 'ವಸುಧೈವ ಕುಟುಂಬಕಮ್,' ಎಂ[illegible] ಮೂಲ ಆದರ್ಶ ರಾಮಾಯಣದಿಂದಲೇ ಬಂ[illegible] ದ್ದೆಂದೂ ಅವರು ನುಡಿದರು.




Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati - 517501.

